ಸೀಸೆಗಳನ್ನು ಅನಧಿಕೃತವಾಗಿ ಆರೋಪಿತರು ಸಾಗಿಸಿದ್ದು ಕಂಡು ಬಂದಿದ್ದರಿಂದ, ಪಂಚರ ಸಮಕ್ಷಮ ಪಂಚನಾಮೆ ತಯಾರಿಸಿ ಸದರಿ ಮದ್ಯಸಾರದ ಸ್ವತ್ತುಗಳು ಹಾಗೂ ಕೈನೆಟಿಕ್ ಹೊಂಡಾ ವಾಹನವನ್ನು ಮುಂದಿನ ಕ್ರಮದ ಕುರಿತು ಜಪ್ತು ಮಾಡಿ, ಪ್ರಥಮ ಮಾಹಿತಿ ವರದಿ ನಂ.87/ 2000ರ ಪ್ರಕಾರ ದಿನಾಂಕ: 09.08.2000ರಂತೆ ಪ್ರಕರಣ ದಾಖಲಿಸಿ, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತಿಳಿಸಿ ಜಪ್ತಾದ ಮುದ್ದೆಮಾಲನ್ನು (ಮಾದರಿ ಸೀಸೆಗಳನ್ನು ಹೊರತು ಪಡಿಸಿ) ಮತ್ತು ಗುನ್ನೆಗೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿರುತ್ತಾರೆ.

2. ದಿನಾಂಕ: 25.09.2000ರಂದು ಶ್ರೀ ಮಂಜುನಾಥ ರಾಮಚಂದ್ರ ಕುಡ್ತಲಕರ, ಸಾ: ಸುಂಕೇರಿ, ಕಾರವಾರ ಇವರು ತಮ್ಮ ವಕೀಲರಾದ ಶ್ರೀ ನಾಗರಾಜ ವಿ. ನಾಯಕ್, ವಕೀಲರು, ಕಾರವಾರ ರವರ ಮೂಲಕ ಜಪ್ತಿಯಾದ ವಾಹನದ ಆರ್.ಸಿ. ಪುಸ್ತಕದ ಝೆರಾಕ್ಸ್ ನಕಲಿನೊಂದಿಗೆ ಅರ್ಜಿ ಸಲ್ಲಿಸಿ, ಸದರಿ ವಾಹನವನ್ನು ನಷ್ಟಭರ್ತಿ ಪತ್ರದ ಆಧಾರದ ಮೇಲೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ.

3. ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನ ಮತ್ತು ಮದ್ಯದ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕ.ಅ. ಕಾಯ್ದೆ 1965ರ ಕಲಂ 43(ಬಿ)(1)ಎ ಪ್ರಕಾರ ಕಾರಣ ಕೇಳಿ ನೋಟೀಸನ್ನು ದಿನಾಂಕ: 17.10.2000ರಂದು ಈ ಪ್ರಕರಣದ ಆರೋಪಿಗೆ ಜಾರಿ ಮಾಡಿಸಲಾಗಿ, ಸದರಿಯವರು ದಿನಾಂಕ: 15.11.2000ರಂದು ನೋಟೀಸ್‌ನ್ನು ಸ್ವೀಕರಿಸಿ, ತನ್ನ ಯಾವುದೇ ರೀತಿಯ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ಅದೇ ರೀತಿ ವಾಹನದ ಮಾಲೀಕರಿಗೂ ಸಹ ಕಾರಣಕೇಳಿ ನೋಟೀಸ್‌ನ್ನು ದಿನಾಂಕ: 17.10.2000ರಂದು ಕಳುಹಿಸಲಾಗಿ, ಅದನ್ನು ದಿನಾಂಕ: 30.10.2000ರಂದು ತನಿಖಾಧಿಕಾರಿಗಳು ಜಾರಿ ಮಾಡಿರುತ್ತಾರೆ. ಇವರೂ ಸಹ ಸದರಿ ಕಾರಣಕೇಳಿ ನೋಟೀಸಿಗೆ ತನ್ನ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

4. ಈ ಪ್ರಾಧಿಕಾರದ ಆದೇಶ ದಿನಾಂಕ: 24.10.2000ರಂತೆ ವಾಹನದ ಮಧ್ಯಂತರ ವಶದ ಬಿಡುಗಡೆಯ ಬಗ್ಗೆ ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿ ನನ್ನ ಪೂರ್ವಾಧಿಕಾರಿಗಳು ಆದೇಶಿಸಿರುತ್ತಾರೆ.

5. ಪ್ರಕರಣದ ತನಿಖಾಧಿಕಾರಿಗಳು ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಈ ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು 25 ಸೆಂಟಿಗ್ರೇಡ್‌ಗಳಲ್ಲಿ ಕ್ರಮವಾಗಿ ಶೇಕಡಾ 37% ವಿ/ವಿ ಯಷ್ಟು ಇರುತ್ತದೆಯಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

6. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯು 1 ರಿಂದ 3ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ.1 ರಿಂದ 4 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಾದ ಸಂತೋಷ ನಾರಾಯಣ ಗುನಗಿ, ಸಾ: ಹಬ್ಬುವಾಡಾ, ಗುನಗಿವಾಡ, ಕಾರವಾರ ಹಾಗೂ ಪಂಚಸಾಕ್ಷಿ ನಂ.2ನೇಯವರಾದ ಸದಾ ತಂದೆ ಪಾಂಡು ಅರ್ಗೇಕರ, ಸಾ: ಹಬ್ಬುವಾಡಾ, ಗುನಗಿವಾಡ, ಕಾರವಾರ ಇವರು ಪ್ರತಿಕೂಲ ಸಾಕ್ಷ್ಯವನ್ನು ನುಡಿದಿರುತ್ತಾರೆ.

7. ಪಿ.ಡಬ್ಲ್ಯೂ-3 ನೇಯವರ ಹೇಳಿಕೆಗಳು ಹಾಗೂ ಅಭಿಯೋಜನೆಪರ ಸಲ್ಲಿಸಲಾಗಿದ್ದ ಲಿಖಿತ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಪಡೆದುಕೊಳ್ಳುವುದಕ್ಕಾಗಿ ಒಟ್ಟು 5 ಬಾರಿ ನೋಟೀಸುಗಳನ್ನು ಜಾರಿಗಾಗಿ ಕಳುಹಿಸಲಾಗಿ ಅರ್ಜಿದಾರರು ತಮ್ಮ ಸ್ವವಿಳಾಶದಲ್ಲಿ ಲಭ್ಯವಿಲ್ಲದ ಕಾರಣ ಅವರ ಮನೆಗೆ ನಾಲ್ಕು ಬಾರಿ ತಿಳಿಸಲಾಗಿರುತ್ತದೆ ಹಾಗೂ ಕೊನೆಯ ಬಾರಿ ಸದರಿಯವರಿಗೆ ಸ್ವತಃ ಜಾರಿ ಮಾಡಲಾಗಿದ್ದರೂ ಸಹ ಸದರಿಯವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ತನ್ನ ಪರ ಸಾಕ್ಷಿಯನ್ನು ನುಡಿದಿರುವುದಿಲ್ಲ.

8. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಹಾಗೂ ಅರ್ಜಿದಾರರ ಪರವಾಗಿ ಶ್ರೀ ನಾಗರಾಜ ವಿ. ನಾಯಕ, ವಕೀಲರು ಕಾರವಾರ ರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**9. ವಿವಾದಾಂಶಗಳು:**

1. ದಿನಾಂಕ: 09.08.2000ರಂದು ಮಧ್ಯಾಹ್ನ ಸುಮಾರು 16.00 ಗಂಟೆಯ ಸಮಯಕ್ಕೆ ಕಾರವಾರ ತಾಲ್ಲೂಕಿನ ಅಮದಳ್ಳಿ ಟೋಲ್‌ನಾಕಾ ಕ್ರಾಸ್ ಹತ್ತಿರ (ಮುದಗಾ ಕ್ರಾಸ್) ಆರೋಪಿತನು ತನ್ನ ಕೈನೆಟಿಕ್ ಹೊಂಡಾ ಕಂಪನಿಯ ಸ್ಕೂಟರ್ ಸಂಖ್ಯೆ: ಕೆಎ-30/ಇ-1337 ನೇದರಲ್ಲಿ ಒಂದು ಪಾಲಿಥಿನ್ ಚೀಲದಲ್ಲಿ ಗೋವಾ ರಾಜ್ಯದ ತಯಾರಿಕೆಯ 180 ಮಿ.ಲೀ.ನ 48 ಕಿಂಗ್ಸ್ ಗ್ರೇಪ್ ಬ್ರ್ಯಾಂಡಿಯ ಬಾಟ್ಲಿಗಳನ್ನು ಆರೋಪಿಯು ಅನಧಿಕೃತವಾಗಿ ಸಾಗಿಸಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32 ಮತ್ತು 34 ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಮಾಡಿದ್ದಾರೆಂದು ಅಭಿಯೋಜನೆ ಪಕ್ಷದವರು ನಿಸ್ಸಂಶಯವಾಗಿ ರುಜುವಾತುಪಡಿಸುತ್ತಾರೆಯೇ, ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು**

ಅಂಶ 1: ಸಕಾರಾತ್ಮಕವಾಗಿ.

ಅಂಶ 2: ನಕಾರಾತ್ಮಕವಾಗಿ.

ಅಂಶ 3: ಸಕಾರಾತ್ಮಕವಾಗಿ.

**ಕಾರಣಗಳು**

10. ಪಿ.ಡಬ್ಲ್ಯೂ 1 ನೇಯವರು ಈ ಪ್ರಕರಣದ ಪಂಚಸಾಕ್ಷಿ ನಂ.2 ನೇಯವರಾಗಿದ್ದು, ಸದರಿಯವರು ದಿನಾಂಕ: 12.12.2001ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಯಲ್ಲಿ ಪ್ರತಿಕೂಲ ಸಾಕ್ಷ್ಯವನ್ನು ನುಡಿದಿರುತ್ತಾರೆ. ಅದೇ ರೀತಿ ಪಿ.ಡಬ್ಲ್ಯೂ-2 ನೇಯವರು ಈ ಪ್ರಕರಣದ ಪಂಚ ಸಾಕ್ಷಿ ನಂ.1 ನೇಯವರಾಗಿದ್ದು, ಇವರು ಸಹ ಈ ಪ್ರಕರಣದಲ್ಲಿ ತನಗೆ ಏನೂ ಗೊತ್ತಿರುವುದಿಲ್ಲವೆಂದೂ, ಪೊಲೀಸರು ತನಗೆ ಬಿಳಿ ಹಾಳೆಯ ಮೇಲೆ ಸಹಿ ಹಾಕು ಎಂದಿದ್ದಕ್ಕೆ ಸಹಿ ಹಾಕಿರುತ್ತೇನೆಂದು ನುಡಿದಿರುತ್ತಾರೆ. ಆದರೆ ಈ ಎರಡೂ ಸಾಕ್ಷಿದಾರರುಗಳು ಅವರ ಹೇಳಿಕೆಗೆ ಸಹಿ ಮಾಡಿರುವುದನ್ನು ಗಮನಿಸಿದಾಗ ಅವರಿಬ್ಬರೂ ಅಕ್ಷರಸ್ಥರಾಗಿದ್ದು, ಸುಳ್ಳು ಪಂಚನಾಮೆಗೆ ಏಕೆ ಸಹಿ ಮಾಡಿದರು ಎನ್ನುವ ಬಗ್ಗೆ ವಿವರಣೆ ನೀಡಿಲ್ಲ. ಮುಟ್ಟುಗೋಲು ಪ್ರಕರಣದಲ್ಲಿ ಪಂಚ ಸಾಕ್ಷಿದಾರರು ಅಭಿಯೋಜನೆಗೆ ಅನುಕೂಲಕರ ಸಾಕ್ಷಿ ನುಡಿದಿರಲೀ ಅಥವಾ ಇಲ್ಲದಿರಲಿ ಅದರಿಂದ ಮುಟ್ಟುಗೋಲು ಆದೇಶಕ್ಕೆ ಧಕ್ಕೆಯಾಗುವುದಿಲ್ಲವೆಂದು ಸನ್ಮಾನ್ಯ ಉಚ್ಛ ನ್ಯಾಯಾಲಯದ ಜಸ್ಟೀಸ್ ರಾಮಣ್ಣನವರ ಇತ್ತೀಚಿನ ತೀರ್ಪಿನಲ್ಲಿ ನಿರ್ಣಯವಾಗಿರುತ್ತದೆ.

11. ಪಿ.ಡಬ್ಲ್ಯೂ 3ನೇಯವರು ಈ ಪ್ರಕರಣದ ಫಿರ್ಯಾದುದಾರರಾಗಿದ್ದು, ಅವರು ಒಂದನೇಯ ವಿವಾದಾಂಶವನ್ನು ರುಜುವಾತುಪಡಿಸಲು ಈ ಪ್ರಾಧಿಕಾರದಲ್ಲಿ ದಿನಾಂಕ: 06.10.2004ರಂದು ಹಾಜರಾಗಿ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಈ ಘಟನೆ ಸಂಭವಿಸಿದಾಗ ತಯಾರಿಸಲಾದಂತಹ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ, ಈ ಪ್ರಕರಣದಲ್ಲಿ ಫಿರ್ಯಾದಿಯು ತಾನೇ ಮತ್ತು ತನಿಖಾಧಿಕಾರಿಯು ತಾನೇ ಎನ್ನುವುದು ಸರಿಯೆಂದೂ, ಈ ಪ್ರಕರಣದಲ್ಲಿ ಆರೋಪಿತನ ತಾಬಾದಿಂದ ಸರಾಯಿ ಮತ್ತು ವಾಹನವನ್ನು ಜಪ್ತು ಮಾಡುವ ಪೂರ್ವದಲ್ಲಿ ಸಂಬಂಧಪಟ್ಟ ಮ್ಯಾಜಿಸ್ಟ್ರೇಟರಿಂದ ಜಪ್ತು ಮಾಡುವ ಬಗ್ಗೆ ಯಾವುದೇ ವಾರೆಂಟ್‌ನ್ನು ಪಡೆದುಕೊಂಡಿರುವುದಿಲ್ಲವೆಂದೂ, ಅದರ ಅವಶ್ಯಕತೆ ಇರುವುದಿಲ್ಲವೆಂದು ನುಡಿದಿದ್ದು, ಆರೋಪಿಯು ತಪ್ಪಿಸಿಕೊಳ್ಳಬಹುದೆಂಬ ಅಥವಾ ಮುದ್ದೆ ಮಾಲುಗಳನ್ನು ಪರಭಾರೆ ಮಾಡಬಹುದೆಂಬ ಅನುಮಾನವಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಜಪ್ತಿ ವಾರೆಂಟ್ ಇಲ್ಲದೇ ಶೋಧನೆಗೈಯ್ಯಲು ಅನ್ವೇಷಣಾಧಿಕಾರಿಗಳಿಗೆ ಕ.ಅ. ಕಾಯ್ದೆ 1965ರ ಕಲಂ 54ರಂತೆ ಅಧಿಕಾರವಿರುತ್ತದೆ. ಜಪ್ತಿ ವಾರೆಂಟ್‌ನ್ನು ಪಡೆದುಕೊಳ್ಳದಿದ್ದುದು ಫಿರ್ಯಾದುದಾರರು ಕ.ಅ. ಕಾಯ್ದೆ ಕಲಂ 52 ಮತ್ತು 54ರ ಉಲ್ಲಂಘನೆಯಾಗುತ್ತದೆಯೇ ಹೊರತು ಇದೇ ಕಾರಣವನ್ನಿಟ್ಟುಕೊಂಡು ಜಪ್ತಿಯನ್ನು ನಿರಾಕರಿಸಲು ಬರಲಾರದಾಗಿ ಈ ಬಗ್ಗೆ ಮಾನ್ಯ ಉಚ್ಛ ನ್ಯಾಯಾಲಯದ ವಿಭಾಗೀಯ ಪೀಠದ ತೀರ್ಪು ಐಎಲ್‌ಆರ್ 2004 ಕೆಎಆರ್ 527 (ಶ್ರೀ ಸೋಮನಾಥ್ ಕರೇಬೈಲ್ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ) ರಲ್ಲಿ ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

In the Case of a search of a vessel, raft, vehicle or animal, the offender will undoubtedly have the opportunity to escape if the officer proposing to conduct the search were to approach a Magistrate to obtain a search warrant before actually conducting the search. That is so, particularly when illicit transport of excisable goods more often than not takes place at odd hours of the day and night to avoid detection, Such offenders are nabbed in the course of routine checks or on the basis of source information received by the excise authorities. To say that a search of a vehicle. Vessel, raft or animal can be conducted only after obtaining a warrant may therefore be unreallstic and may potentially defeat the very object underlying the excise legislation. That is because in the case of excisable goods that are in a state of motion, any delay which is implicit in an attempt to get a search warrant will give the Offender the opportunity to escape or destroy the evidence regarding the offence.

Failure to record in black and white what is obvious may not therefore by itself constitute an illegality so as to render the search or the subsequent proceddings based on the same illegal. Such failure may be only procedural irregularity not affecting the validity of the search.

The seizure of the goods while the same were in motion or were capable of being put into motion should sufficiently satisfy the conscience of the law that no prejudice on account of non recording of the reasons for not obtaining warrant has been caused.

ಮೇಲ್ಕಾಣಿಸಿದ ತೀರ್ಪು ಈ ಪ್ರಕರಣಕ್ಕೆ ಅನ್ವಯವಾಗುತ್ತದೆ. ರಾಸಾಯನಿಕ ಪರೀಕ್ಷೆಗೆ ಎಲ್ಲಾ ಬಾಟ್ಲಿಗಳನ್ನು ಕಳುಹಿಸುವುದಕ್ಕೆ ತೊಂದರೆ ಇತ್ತೆಂದೂ, ಏನು ತೊಂದರೆ ಇತ್ತು ಎನ್ನುವುದರ ಬಗ್ಗೆ ನಮೂದಿಸಿಲ್ಲವೆಂದು ನುಡಿದಿರುತ್ತಾರೆ. ಎಲ್ಲಾ ಬಾಟ್ಲಿಗಳನ್ನು ಬೆಂಗಳೂರಿಗೆ ಹೊತ್ತುಕೊಂಡು ಹೋಗುವುದು ಕಷ್ಟಸಾಧ್ಯವಾಗಿರುವುದರಿಂದ ರಾಸಾಯನಿಕ ಪರೀಕ್ಷೆಗೆ ತೆಗೆದಿಲ್ಲಬಹುದಾಗಿದೆ. ಈ ಮೊಕದ್ದಮೆಯಲ್ಲಿ ಆರೋಪಿಯು ಮಾನ್ಯ ಕ್ರಿಮಿನಲ್ ನ್ಯಾಯಾಲಯದಲ್ಲಿ ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಈ ಬಗ್ಗೆ ನಮ್ಮ ಗೌರವಾನ್ವಿತ ಉಚ್ಛನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್.ವಿಜಯ ಕುಮಾರ ವಿರುದ್ಧ ಡೆಪ್ಯೂಟಿ ಕನ್ಸ್‌ರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್‌ಆರ್-2002, ಕೆ.ಎ.ಆರ್.1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ. ಈ ಆದೇಶವನ್ನು ಈ ಪ್ರಕರಣದಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ.

Rejecting the Contention of the owner of the seized vehicle that non-filing of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation.

ಮೇಲ್ಕಾಣಿಸಿದ ತೀರ್ಪು ಈ ಪ್ರಕರಣಕ್ಕೆ ಅನ್ವಯಿಸುತ್ತದೆ. ಪ್ರಕರಣ ದಾಖಲಾಗಿ ಬಹಳ ವರ್ಷಗಳ ನಂತರ ಈ ಸಾಕ್ಷಿದಾರರು ಸಾಕ್ಷಿ ನುಡಿದಿರುವುದರಿಂದ ಎಷ್ಟು ಸೀಲು ಹಾಕಿದ್ದರೆಂಬುದನ್ನು ಸಹಜವಾಗಿ ಮರೆತಿರಬಹುದಾಗಿದೆ. ಪಂಚಸಾಕ್ಷಿದಾರರು ಪ್ರತಿಕೂಲ ಸಾಕ್ಷಿ ನುಡಿದರೂ ಸಹ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳುವಂತಿಲ್ಲವೆಂದು ತೀರ್ಪಾಗಿರುವುದರಿಂದ ಪಂಚರ ಬಗ್ಗೆ ವಿಶ್ಲೇಷಿಸುವ ಅವಶ್ಯಕತೆ ಕಂಡುಬರುವುದಿಲ್ಲ. ವಾರಸುದಾರರಿಲ್ಲದ ಮುದ್ದೆ ಮಾಲುಗಳು ಸಿಕ್ಕಾಗ ಅವುಗಳ ಬಗ್ಗೆ ಪ್ರಕರಣ ದಾಖಲಿಸಲು ಅವಕಾಶವಿರುವಾಗ ಇದೇ ಆರೋಪಿತ ವಿರುದ್ಧ ಏಕೆ ಪ್ರಕರಣ ದಾಖಲಿಸಲಾಯಿತು? ಪ್ರಕರಣದ ಆರೋಪಿಗೂ ಮತ್ತು ಫಿರ್ಯಾದಿ ಕಡೆಯವರಿಗೂ ಇರುವ ದ್ವೇಷವೇನು ಎಂಬುದರ ಬಗ್ಗೆ ಎದುರುದಾರರ ಪಕ್ಷದವರು ವಿವರಿಸಿರುವುದಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಅಭಿಯೋಜನೆ ಪಕ್ಷದವರು ಈ ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದು ಸ್ಪಷ್ಟವಾಗಿರುತ್ತದೆ.

13. ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲಿಕರಿಗೆ ಸಾಕಷ್ಟು ಅವಕಾಶವನ್ನು ನೀಡಿದಾಗಲೂ ಸಹ ಅವರು ಈ ಪ್ರಕರಣದಲ್ಲಿ ತಾನು ಶಾಮೀಲಾಗದೇ ಮತ್ತು ಈ ಕೃತ್ಯವು ತನ್ನ ಗಮನಕ್ಕೆ ಬಾರದೇ ನಡೆದಿದೆ ಎಂಬುದನ್ನು ನಿರೂಪಿಸಲು ಈ ಪ್ರಾಧಿಕಾರದಲ್ಲಿ ಒಮ್ಮೆಯೂ ಸಹ ಹಾಜರಾಗಿ ತನ್ನ ಪರ ಸಾಕ್ಷ್ಯವನ್ನು ನುಡಿಯದಿರುವುದರಿಂದ ಈ ಕೃತ್ಯವು ಅವರ ಗಮನಕ್ಕೆ ಬಂದೇ ಮತ್ತು ಅವರು ಶಾಮೀಲಾಗಿಯೇ ನಡೆದಿದೆ ಎಂಬುದು ಸ್ಪಷ್ಟವಾಗಿ ಸಾಬೀತಾಗುತ್ತದೆ. ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕರು ತನ್ನ ಮುಗ್ದತೆಯನ್ನು ಸಾಬೀತುಪಡಿಸಲು ಅವಕಾಶವಿದ್ದಾಗಲೂ ಸಹ ತನ್ನ ಯಾವುದೇ ರೀತಿಯ ಹೇಳಿಕೆಯನ್ನು ನೀಡದಿರುವುದನ್ನು ಗಮನಿಸಿದಾಗ ಈ ಕೃತ್ಯವನ್ನು ಆತನು ಒಪ್ಪಿಕೊಂಡಂತಾಗುತ್ತದೆ. ಈ ಬಗ್ಗೆ ಗೌರವಾನ್ವಿತ ಉಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಜನ್ ಪಿಟೀಷನ್ ನಂ.338 ಆಫ್ 2000, ದಿನಾಂಕ: 01.10.2002 (ಅಬಕಾರಿ ನಿರೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ಇತರರು ವಿರುದ್ಧ ಪಿ. ವೆಂಕಟರಮಣ) ರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

"A close reading of conditions would imply that the person incharge of the vehicle if he were to misuse the vehicle for illegal transporting directely by himself or allowing others conciously, the owner becomes vicariously lible for the acts and he has to suffer the grave consequences of confiscation. The said excuse is not a ground to exonerate from the consequence of confiscation under section 43A (2) of the Act Confiscation."

ಈ ಮೇಲಿನ ತೀರ್ಪು ಈ ಪ್ರಕರಣಕ್ಕೆ ಅನ್ವಯಿಸುತ್ತದೆ. ಆದುದರಿಂದ ಈ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನ ಯಾರ ವಶದಲ್ಲಿತ್ತೋ ಅವರ ಗಮನಕ್ಕೆ ಬಾರದೇ ಮತ್ತು ಅವರು ಶಾಮೀಲಾಗದೇ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬುದನ್ನು ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಲು ಎದುರುದಾರರ ಪಕ್ಷದವರು ವಿಫಲರಾಗಿರುವದು ಕಂಡುಬರುತ್ತದೆ.

14. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತ ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 62/2001 ದಿನಾಂಕ: 15.07.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 183/ 2001 ದಿನಾಂಕ: 21.07.2004, ಕ್ರಿಮಿನಲ್ ಅಪೀಲ್ ಸಂಖ್ಯೆ: 121/ 2001, ದಿನಾಂಕ: 26.11.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 61/ 2004, ದಿನಾಂಕ: 15.04.2005ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಾರವಾರ ಗ್ರಾಮಾಂತರ ಪೊಲೀಸ್ ಠಾಣೆಯ ಗುನ್ಹೆ ಸಂಖ್ಯೆ: 87/ 2000 ದಿನಾಂಕ: 09.08.2000ರಲ್ಲಿ ಜಪ್ತಿಯಾದಂತಹ ಒಂದು ಕೈನೆಟಿಕ್ ಹೊಂಡಾ ಕಂಪನಿಯ ಸ್ಕೂಟರ್ ಸಂಖ್ಯೆ: ಕೆಎ-30/ ಇ-1337 ನೇದನ್ನು ಹಾಗೂ ಕಿಂಗ್ಸ್ ಗ್ರೇಪ್ ಬ್ರಾಂದಿ 180 ಮಿ.ಲೀ.ನ 48 ಸೀಸೆಗಳನ್ನು (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಸೀಸೆಗಳನ್ನು ಹೊರತುಪಡಿಸಿ) ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಮುಟ್ಟುಗೋಲು ಹಾಕಿದ ಮದ್ಯಮ ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಅನುಮೋದನೆ ಪಡೆಯದ ಕಾರಣ ಅವುಗಳನ್ನು ಅಬಕಾರಿ ಉಪ ಅಧೀಕ್ಷಕರು, ಉಪ ವಿಭಾಗ, ಕಾರವಾರ ರವರ ಸಮಕ್ಷಮ ನಾಶಪಡಿಸಿ, ಖಾಲಿ ಸೀಸೆಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಅಬಕಾರಿ ನಿರೀಕ್ಷಕರು, ಕಾರವಾರವಲಯ ಇವರಿಗೆ ಆದೇಶಿಸಿದೆ.

ಈ ಆದೇಶವು ಅರ್ಜಿದಾರರ ಪರ ವಕೀಲರಿಗೆ ತಲುಪಿದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಮೇ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಎ.ಎಸ್. ವಿಶ್ವರೂಪ**
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ.1: ಸಂತೋಷ ನಾರಾಯಣ ಗುನಗಿ.
ಪ್ರಾ.ಸಾ.ನಂ.2: ಸದಾ ಪಾಂಡು ಅರ್ಗೇಕರ.
ಪ್ರಾ.ಸಾ.ನಂ.3: ಆಂತೋನಿ ಜಾನ್ ಜೆ.ಕೆ., ಸಿ.ಪಿ.ಐ.

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

-ಇಲ್ಲಾ-

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ1 : ದಿನಾಂಕ: 09.08.2000ರ ಪಂಚನಾಮೆ.
ನಿಶಾನೆ ಪಿ2 : ಪ್ರ.ಮಾ. ವರದಿ.
ನಿಶಾನೆ ಪಿ2ಎ : ಪ್ರ.ಮಾ. ವರದಿ ಮೇಲೆ ಪಿ.ಡಬ್ಲ್ಯೂ 3 ನೇಯವರ ಸಹಿ.
ನಿಶಾನೆ ಪಿ3 : ದಿನಾಂಕ: 12.08.2000ರ ಪಂಚನಾಮೆ.
ನಿಶಾನೆ ಪಿ4: ರಾಸಾಯಾನಿಕ ವಿಶ್ಲೇಷಣಾ ವರದಿ.

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಎ.ಎಸ್. ವಿಶ್ವರೂಪ**
ಪಿ.ಆರ್.1544 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

## ಅಧೀಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ

**ನಂ. ಅಬಕಾರಿ/ ಸಿಆರ್‌ಎಂ/ ಡಿಟಿಸಿಆರ್/ 153/ 2001-02, ದಿನಾಂಕ:31ನೇ ಮೇ, 2005**

**ಉಪಸ್ಥಿತರು:** ಶ್ರೀ ಎ.ಎಸ್.ವಿಶ್ವರೂಪ, ಕೆ.ಇ.ಎಸ್.
ಅಧೀಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು :** ಶ್ರೀ ಕೆ. ರಾಮರಾವ್
ಪೊಲೀಸ್ ಉಪ ನಿರೀಕ್ಷಕರು, ಕಾರವಾರ ಶಹರ ಪೊಲೀಸ್ ಠಾಣೆ.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ)
**ವಿರುದ್ಧ**

**ಅರ್ಜಿದಾರರು :** ವಿಶ್ವಾಸ ಬಾಬು ಬಾಡಕರ್,
ಸಾ: ನಂದನಗದ್ದಾ, ಬಾಡ, ಕಾರವಾರ.
(ಶ್ರೀ ಎಸ್.ಪಿ. ಗಾಂವಕರ, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ:22.12.2001ರಂದು ರಾತ್ರಿ ಶಹರದಲ್ಲಿ ಗಸ್ತು ಕರ್ತವ್ಯದ ಚೆಕ್ಕಿಂಗ್ ಡ್ಯೂಟಿ ಇದ್ದ ಕಾರಣ ಸಿಬ್ಬಂದಿಗಳೊಂದಿಗೆ ವಾಹನಗಳನ್ನು ತಪಾಸಿಸುತ್ತಾ ಹೊರಟಿರುವಾಗ ದಿನಾಂಕ: 22.12.2001ರ ಬೆಳಗಿನ ಜಾವ 5.00 ಗಂಟೆಗೆ ಕಾಳಿ ಬ್ರೀಜ್ ಹತ್ತಿರ ಬಂದು ತಲುಪಿ ವಾಹನಗಳನ್ನು ತಪಾಸಿಸುತ್ತಿದ್ದಾಗ ಗೋವಾ ಕಡೆಯಿಂದ ಬಂದಂತಹ ಜೀಪ್ ಸಂಖ್ಯೆ: ಜಿಎ-01/ಎ-7703 ನೇದನ್ನು ಆರೋಪಿಯಾದಂತಹ ಅರ್ಜಿದಾರರು ಗೋವಾ ಕಡೆಯಿಂದ ಚಲಾಯಿಸಿಕೊಂಡು ಬರುತ್ತಿದ್ದಾಗ ಕೈಸನ್ನೆ ಮಾಡಿ ನಿಲ್ಲಿಸಿ ವಾಹನವನ್ನು ತಪಾಸಿಸಲಾಗಿ ಅದರಲ್ಲಿ 20 ಲೀ. ಗೋವಾ ಸರಾಯಿ ಇರುವ ಒಂದು ಕ್ಯಾನು ಮತ್ತು 750 ಮಿ.ಲೀ.ನ 24 ಹೈವರ್ಡ್ಸ್ ವಿಸ್ಕಿ ಬಾಟಲಿಗಳು ಇದ್ದದ್ದು ಕಂಡುಬಂದಿದ್ದರಿಂದ ಅವುಗಳನ್ನು ತಾಬಾದಲ್ಲಿ ಇಟ್ಟು ಸಾಗಿಸಲು ಪಾಸ್ ಅಥವಾ ಪರ್ಮಿಟ್ ಇದೆಯೇ ಹೇಗೆ ಎಂದು ಕೇಳಿದಾಗ ಆರೋಪಿಯ ಬಳಿಯಲ್ಲಿ ಈ ಬಗ್ಗೆ ಯಾವುದೇ ದಾಖಲೆಗಳು ಇಲ್ಲದಿದ್ದದ್ದು ಕಂಡು ಬಂದಿದ್ದರಿಂದ ಇದನ್ನು ಅಕ್ರಮ ಸಾರಾಯಿ ಸಾಗಾಣಿಕೆಯ ಪ್ರಕರಣವೆಂದು ಪರಿಗಣಿಸಿ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ಮತ್ತು 34ರ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ, ವಾಹನ ಮತ್ತು ಮದ್ಯಸಾರದ ಸ್ವತ್ತುಗಳನ್ನು ಮುಂದಿನ ಕ್ರಮದ ಕುರಿತು ಜಪ್ತು ಮಾಡಿ ಕಾರವಾರ ಶಹರ ಪೊಲೀಸ್ ಠಾಣೆಯಲ್ಲಿ ಫಿರ್ಯಾದು ದಾಖಲಿಸಿದ ಪ್ರಕಾರ ಪ್ರಥಮ ಮಾಹಿತಿ ವರದಿ ಸಂಖ್ಯೆ: 265/ 2001 ದಿನಾಂಕ:22.12.2001ರಂತೆ ಪ್ರಕರಣವನ್ನು ದಾಖಲಿಸಿ, ಜಪ್ತಾದ ಮುದ್ದೆಮಾಲನ್ನು (ಮಾದರಿ ಸೀಸೆಗಳನ್ನು ಹೊರತುಪಡಿಸಿ) ಮತ್ತು ಗುನ್ಹೆಗೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು, ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ.

2. ದಿನಾಂಕ:02.01.2002ರಂದು ಶ್ರೀ ವಿಶ್ವಾಸ ಬಾಬು ಬಾಡಕರ್, ಸಾ: ನಂದನಗದ್ದಾ, ಕಾರವಾರ ಇವರು ಶ್ರೀ ಎಸ್.ಪಿ. ಗಾಂವಕರ, ವಕೀಲರು, ಕಾರವಾರ ರವರ ಮೂಲಕ ಜಪ್ತಿಯಾದ ವಾಹನದ ಆರ್.ಸಿ. ಪುಸ್ತಕದ ದೃಢೀಕೃತ ನಕಲಿನೊಂದಿಗೆ ಅರ್ಜಿ ಸಲ್ಲಿಸಿ, ತನ್ನ ಮೇಲೆ ಹೊರಿಸಲಾಗಿರುವ ಆರೋಪಗಳನ್ನು ಅಲ್ಲಗಳೆಯುತ್ತಾ, ಈ ಪ್ರಕರಣದಲ್ಲಿ ಜಪ್ತಿಯಾದ ವಾಹನವನ್ನು ತನಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ.

3. ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನ ಮತ್ತು ಮದ್ಯದ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕ.ಅ. ಕಾಯ್ದೆ 1965ರ ಕಲಂ 43(ಬಿ)(1)ಎ ಪ್ರಕಾರ ಕಾರಣ ಕೇಳಿ ನೋಟೀಸನ್ನು ದಿನಾಂಕ: 16.01.2002ರಂದು/ ಅರ್ಜಿದಾರ/ ವಾಹನದ ಮಾಲೀಕರಿಗೆ ಜಾರಿ ಮಾಡಲಾಗಿ, ಅದಕ್ಕೆ ದಿನಾಂಕ: 05.02.2002ರಂದು ತನ್ನ ಸಮಜಾಯಿಷಿಯನ್ನು ಸಲ್ಲಿಸುತ್ತಾ ವಾಹನದ ಮಾಲೀಕನು ಈ ಪ್ರಕರಣದಲ್ಲಿನ ವಾಹನವನ್ನು ಅನಧಿಕೃತ ಮದ್ಯ ಸಾಗಾಣಿಕೆಗೆ ಅಥವಾ ಇನ್ನಿತರ ಅಪರಾಧಗಳಿಗೆ ಬಳಸಿದ್ದು ಇರುವುದಿಲ್ಲವಾಗಿಯೂ, ಪೊಲೀಸರು ಸರಿಯಾದ ತನಿಖೆ ನಡೆಸದೇ ಈ ಅರ್ಜಿದಾರನ ಹಾಗೂ ಆತನ ವಾಹನದ ವಿರುದ್ಧ ಕ್ರಿಮಿನಲ್ ಮೊಕದ್ದಮೆಯನ್ನು ದಾಖಲಿಸಿರುತ್ತಾರೆಂದೂ, ಅರ್ಜಿದಾರನು ತನ್ನ ಮುಗ್ಧತೆಯನ್ನು ಸಾಬೀತುಪಡಿಸುವುದಕ್ಕಾಗಿ ಈ ಪ್ರಕರಣವನ್ನು ನಡೆಸಲಿರುವನೆಂದೂ, ಮತ್ತು ಆತನು ತಪ್ಪು ಮಾಡಿಲ್ಲವೆಂದೂ, ಹಾಗೂ ಯಾವುದೇ ರೀತಿಯ ಅಪರಾಧದಲ್ಲಿ ಭಾಗಿಯಾಗಿಲ್ಲವೆಂದು ತಿಳಿಸಿರುತ್ತಾರೆ.

4. ಈ ಪ್ರಾಧಿಕಾರದ ಆದೇಶ ದಿನಾಂಕ:16.01.2002ರಂತೆ ವಾಹನದ ಮಧ್ಯಂತರ ವಶದ ಬಿಡುಗಡೆಯ ಬಗ್ಗೆ ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿದ ಆದೇಶದ ವಿರುದ್ಧ ಅರ್ಜಿದಾರರು ಮೇಲ್ಮನವಿ ಸಲ್ಲಿಸಿದನ್ವಯ ಮಾನ್ಯ ಸೆಶನ್ಸ್ ನ್ಯಾಯಾಲಯ, ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 08/2002, ದಿನಾಂಕ: 11.02.2002ರಲ್ಲಿ ಆದೇಶಿಸಿದಂತೆ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ ಸಿಆರ್‌ಎಂ/ ಡಿಟಿಸಿಆರ್/ 153/ 2001-02, ದಿನಾಂಕ:09.04.2002ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಜೀಪ್ ಸಂಖ್ಯೆ: ಜಿಎ-01/ಎ-7703 ನೇದಕ್ಕೆ ರೂಪಾಯಿ 75,000/-ಗಳ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಕೆಲವು ಷರತ್ತುಗಳನ್ನು ವಿಧಿಸಿ, ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ನನ್ನ ಪೂರ್ವಾಧಿಕಾರಿಗಳು ಆದೇಶಿಸಿರುತ್ತಾರೆ.

5. ಪ್ರಕರಣದ ತನಿಖಾಧಿಕಾರಿಗಳಾದ ಪಿ.ಎಸ್.ಐ. ಕಾರವಾರ ಶಹರ ಪೊಲೀಸ್ ಠಾಣೆ ಇವರು ದಿನಾಂಕ: 24.08.2002ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು 25 ಸೆಂಟಿಗ್ರೇಡ್‌ಗಳಲ್ಲಿ ಕ್ರಮವಾಗಿ ಶೇಕಡಾ 42% ಮತ್ತು 15% ವಿ/ವಿ ಯಷ್ಟು ಇರುತ್ತದೆಯಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

6. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32 ಮತ್ತು 34ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯು 1 ರಿಂದ 3ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ.1 ರಿಂದ 3 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿದಾರರಾದ ಪರೇಶ ಗಂಗಾಧರ ನಾಯ್ಕ, ಸಾ: ತೆಲಂಗ

ರೋಡ್, ನಂದನಗದ್ದಾ, ಕಾರವಾರ ಇವರು ಹಾಗೂ ಪಂಚಸಾಕ್ಷಿ ನಂ.2ನೇಯವರಾದ ವಿಲಾಸ ಆನಂದು ನಾಯ್ಕ, ಸಾ: ಸುಭದ್ರಾ ಹೋಟೇಲ್ ಎದುರು, ಕೋಡಿಬಾಗ, ಕಾರವಾರ ಇವರು ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ.

7. ಪಿ.ಡಬ್ಲ್ಯೂ-1 ನೇಯವರ ಹೇಳಿಕೆಗಳು ಹಾಗೂ ಅಭಿಯೋಜನೆಪರ ಸಲ್ಲಿಸಲಾಗಿದ್ದ ಲಿಖಿತ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಪಡೆಯಲು ಬಯಸಿದಾಗ ಅರ್ಜಿದಾರರ ಪರ ವಕೀಲರು ತನ್ನ ಪರ ಯಾವುದೇ ಸಾಕ್ಷಿಯನ್ನು ನುಡಿಸುವುದಿಲ್ಲವಾಗಿ ತಿಳಿಸಿರುತ್ತಾರೆ.

8. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಹಾಗೂ ಅರ್ಜಿದಾರರ ಪರವಾಗಿ ಶ್ರೀ ಎಸ್.ಪಿ. ಗಾಂವಕರ, ವಕೀಲರು ಕಾರವಾರ ರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**9. ವಿವಾದಾಂಶಗಳು:**

1. ದಿನಾಂಕ: 22.12.2001ರಂದು ಬೆಳಿಗ್ಗೆ 5.00 ಗಂಟೆಗೆ ಕಾರವಾರ ತಾಲ್ಲೂಕಿನ ಕಾಳಿ ಬ್ರಿಡ್ಜ್ ಹತ್ತಿರ ಆರೋಪಿತನು ತಾನು ಚಲಾಯಿಸುತ್ತಿದ್ದ ಜೀಪ್ ಸಂಖ್ಯೆ: ಜಿಎ-01/ ಎ-7703 ನೇದರಲ್ಲಿ ಗೋವಾ ರಾಜ್ಯದ ತಯಾರಿಕೆಯ 20 ಲೀಟರ್ ಸರಾಯಿ ಇರುವ ಒಂದು ಕ್ಯಾನು ಮತ್ತು 750 ಮಿ.ಲೀ.ನ 24 ಹೈವರ್ಡ್ಸ್ ವಿಸ್ಕಿ ಬಾಟ್ಲಿಗಳನ್ನು ಆರೋಪಿಯು ಅನಧಿಕೃತವಾಗಿ ಸಾಗಿಸಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32 ಮತ್ತು 34 ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಮಾಡಿದ್ದಾರೆಂದು ಅಭಿಯೋಜನೆ ಪಕ್ಷದವರು ನಿಸ್ಸಂಶಯವಾಗಿ ರುಜುವಾತುಪಡಿಸುತ್ತಾರೆಯೇ, ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು**

ಅಂಶ 1: ಸಕಾರಾತ್ಮಕವಾಗಿ.

ಅಂಶ 2: ನಕಾರಾತ್ಮಕವಾಗಿ.

ಅಂಶ 3: ಸಕಾರಾತ್ಮಕವಾಗಿ.

**ಕಾರಣಗಳು**

10. ಒಂದನೇಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಕೆ. ರಾಮರಾವ್, ಸಿ.ಪಿ.ಐ. ಟ್ರಾಫಿಕ್ ಮಂಗಳೂರು ರವರು ಈ ಪ್ರಾಧಿಕಾರದಲ್ಲಿ ದಿನಾಂಕ:23.06.2004ರಂದು ಹಾಜರಾಗಿ ಪಿ.ಡಬ್ಲ್ಯೂ 1 ರಂತೆ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ತಾನು ಜೂನ್ 2000 ದಿಂದ ಆಗಸ್ಟ್ 2002ರವರೆಗೆ ಕಾರವಾರ ಶಹರದ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಆಗಿ ಕೆಲಸ ಮಾಡಿದ್ದೇನೆಂದೂ, ದಿನಾಂಕ: 21.12.2001ರಂದು ರಾತ್ರಿ 11.00 ಗಂಟೆಗೆ ತಾನು ಮತ್ತು ಸಿಬ್ಬಂದಿಗಳಾದ ಪಿ.ಸಿ. 499, ಪಿ.ಸಿ.1341, ಪಿ.ಸಿ.1332 ಹಾಗೂ 995 ಇವರೊಡನೆ ನಗರದಲ್ಲಿ ಗಸ್ತು ಸಂಚರಿಸಿ, ಬೆಳಗಿನ ಜಾವ ದಿನಾಂಕ: 22.12.2001ರಂದು ಸಮಯ 05.00 ಗಂಟೆಗೆ ಕಾಳಿ ಬ್ರಿಡ್ಜ್‌ನ ಹತ್ತಿರ ವಾಹನಗಳನ್ನು ಚೆಕ್ ಮಾಡುತ್ತಿರುವಾಗ ಗೋವಾ ಕಡೆಯಿಂದ ಬಂದಂತಹ ಜೀಪ್ ಸಂಖ್ಯೆ: ಜಿಎ-01/ಎ-7703 ನೇದರಲ್ಲಿ ಚಾಲಕನು ಬರುತ್ತಿದ್ದುದನ್ನು ನಿಲ್ಲಿಸಿ ವಾಹನವನ್ನು ಚೆಕ್ ಮಾಡಲಾಗಿ ವಾಹನದಲ್ಲಿ ಹೈವಾರ್ಡ್ಸ್ ವಿಸ್ಕಿ ಎಂಬ 750 ಮಿ.ಲೀ.ನ ಒಟ್ಟು 25 ಸೀಲ್ಡ್ ಬಾಟ್ಲಿಗಳು ಹಾಗೂ 25 ಲೀಟರ್ ಆಗುವಷ್ಟು ತೆಂಗಿನ ಸರಾಯಿಯ ಕ್ಯಾನು ಇದರ ಅಂದಾಜು ಮೌಲ್ಯ 26.20 ಇದ್ದದನ್ನು ನೋಡಿ ಚಾಲಕನ ಹೆಸರು ಕೇಳಿದಾಗ ತನ್ನ ಹೆಸರು ವಿಶ್ವಾಸ ಬಾಬು ಬಾಡಕರ್ ಸಾ: ನಂದನಗದ್ದಾ ಕಾರವಾರ ಎಂದು ತಿಳಿಸಿದನೆಂದೂ, ಸದರಿ ಮದ್ಯದ ಸಾಗಾಟದ ಬಗ್ಗೆ ಪಾಸ ಅಥವಾ ಪರ್ಮಿಟ್ ಕೇಳಿದಾಗ ಚಾಲಕನು ಯಾವುದೇ ಕಾಗದ ಪತ್ರಗಳನ್ನು ಹಾಜರುಪಡಿಸಿರುವುದಿಲ್ಲವೆಂದೂ, ತಕ್ಷಣ ಸಿಬ್ಬಂದಿಯವರಾದ ಪಿ.ಸಿ. 1214 ನೇಯವರನ್ನು ಕರೆಯಿಸಿ ಎರಡು ಜನ ಪಂಚರನ್ನು ಸ್ಥಳದಲ್ಲಿಯೇ ಹಾಜರು ಮಾಡಿಕೊಂಡು ಪಂಚನಾಮೆಯನ್ನು ಬರೆಯಲಾಯಿತೆಂದೂ, ಹಾಗೂ ರಾಸಾಯನಿಕ ಪರೀಕ್ಷೆಗೋಸ್ಕರ ಕ್ಯಾನಿನಿಂದ 750 ಮಿ.ಲೀ. ಆಗುವಷ್ಟು ಸರಾಯಿಯನ್ನು ಒಂದು ಬಾಟ್ಲಿಯಲ್ಲಿ ಪ್ರತ್ಯೇಕವಾಗಿ ತೆಗೆಯಿಸಿ ಜಪ್ತು ಮಾಡಿಸಿಕೊಂಡೆನೆಂದೂ, ಹಾಗೂ ಇದನ್ನು ಸಾಗಿಸಲು ಉಪಯೋಗಿಸಿದಂತಹ ಜೀಪ್‌ನ್ನು ಪಂಚರ ಸಮಕ್ಷಮ ಜಪ್ತು ಮಾಡಿ ವಶಕ್ಕೆ ತೆಗೆದುಕೊಂಡೆವೆಂದೂ, ಅದರ ಅಂದಾಜು ಮೌಲ್ಯ ರೂ.75,000/- ಗಳಾಗಿರುತ್ತವೆಂದೂ, ಆರೋಪಿತನನ್ನು ಸ್ಥಳದಲ್ಲಿಯೇ ದಸ್ತಗಿರ್ ಮಾಡಿ, ಠಾಣೆಗೆ ಬಂದು ಕಾರವಾರ ಶಹರ ಪೊಲೀಸ್ ಠಾಣೆ ಅಪರಾಧ ಸಂಖ್ಯೆ: 265/2001 ಕಲಂ 32 ಹಾಗೂ 34 ರಂತೆ ಕ.ಅ. ಕಾಯ್ದೆಯಂತೆ ಪ್ರಕರಣವನ್ನು ದಾಖಲಿಸಿರುತ್ತೇನೆಂದೂ, ಇದೇ ದಿನದಂದು ಜಪ್ತು ಮಾಡಿದಂತಹ ಸರಾಯಿ ಬಾಟ್ಲಿಗಳನ್ನು ಹಾಗೂ ವಾಹನವನ್ನು ಮಾನ್ಯ ನ್ಯಾಯಾಲಯಕ್ಕೆ ಸ್ವತ್ತಿನ ಪಟ್ಟಿ ಸಂಖ್ಯೆ 134/ 2001 ನೇದರಂತೆ ಸಲ್ಲಿಸಿ, ಇದೇ ದಿನದಂದು ಆರೋಪಿತನ ವಿರುದ್ಧ ದಸ್ತಗೀರ್ ಕ್ರಮವನ್ನು ಜರುಗಿಸಿ ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತೇನೆಂದೂ ಹಾಗೂ ಈ ಪ್ರಕರಣದಲ್ಲಿ ಸಹಕರಿಸಿದಂತಹ ಸಿಬ್ಬಂದಿಗಳಾದ ಪಿ.ಸಿ. 499, ಪಿ.ಸಿ.1341, ಪಿ.ಸಿ.1342, ಪಿ.ಸಿ.935 ಹಾಗೂ ಪಿ.ಸಿ.1214 ನೇಯವರುಗಳ ಹೇಳಿಕೆಗಳನ್ನು ಪಡೆದುಕೊಂಡಿರುತ್ತೇನೆಂದು ನುಡಿದಿರುತ್ತಾರೆ. ನಂತರ ದಿನಾಂಕ: 23.02.2001ರಂದು ಈ ಪ್ರಕರಣದ ತನಿಖೆಯನ್ನು ಮುಂದುವರೆಸಿ ಇದರಲ್ಲಿ ಜಪ್ತಿಯಾದ ಸ್ವತ್ತುಗಳಾದ ಸರಾಯಿ ಬಾಟ್ಲಿ ಹಾಗೂ ಸರಾಯಿ ಕ್ಯಾನು ಹಾಗೂ ಜೀಪ್ ಸಂಖ್ಯೆ ಜಿಎ-01/ಎ-7703 ನೇದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ಅಬಕಾರಿ ಪ್ರಾಧಿಕಾರದಲ್ಲಿ ರಿಪೋರ್ಟ್‌ನ್ನು ಬರೆದು ಕಳುಹಿಸಿಕೊಟ್ಟಿರುತ್ತೇನೆಂದೂ, ದಿನಾಂಕ: 21.12.2001ರಂದು ಜಪ್ತು ಮಾಡಿದ ಸರಾಯಿ ಬಾಟ್ಲಿಗಳು ಹಾಗೂ ಕ್ಯಾನಿನಿಂದ ತೆಗೆದಂತಹ 750 ಎಂ.ಎಲ್. ಸರಾಯಿಯನ್ನು ರಾಸಾಯನಿಕ ಪರೀಕ್ಷೆಗೋಸ್ಕರ ಪಿ.ಸಿ. 977 ನೇಯವರ ಮುಖಾಂತರ ಮಾನ್ಯ ನಿರ್ದೇಶಕರು ಹಾಗೂ ರಾಸಾಯನಿಕ ಪರೀಕ್ಷಕರು, ವಿಧಿ ವಿಜ್ಞಾನ ಪ್ರಯೋಗಾಲಯ, ಬೆಂಗಳೂರು ರವರಿಗೆ ಕಳುಹಿಸಿಕೊಟ್ಟಿರುತ್ತೇನೆಂದೂ, ದಿನಾಂಕ: 24.02.2002 ರಂದು ಸಿ.ಇ. ಪರೀಕ್ಷೆ ಪ್ರಮಾಣ ಪತ್ರ ಬಂದಿದ್ದನ್ನು ಸ್ವೀಕರಿಸಿ, ಈ ಪ್ರಕರಣದಲ್ಲಿ ಸಾಕಷ್ಟು ಸಾಕ್ಷಿ ಪುರಾವೆ ಸಂಗ್ರಹವಾಗಿದ್ದರಿಂದ ತಾನು ದೋಷಾರೋಪಣೆ ಸಲ್ಲಿಸಿರುತ್ತೇನೆಂದೂ, ತಾನು ತನಿಖೆಯ ಕಾಲಕ್ಕೆ ಜಪ್ತು ಮಾಡಿದ ವಾಹನ ಸಂಖ್ಯೆ ಜಿಎ-01/ಎ-7703 ಇದರ ಮಾಲೀಕರು ಆರೋಪಿಯೇ ಎಂದು ನಂತರ ಗೊತ್ತಾಯಿತೆಂದೂ, ಆ ದಿವಸ ವಾಹನ ಸಮೇತ ಅರ್ಜಿದಾರರನ್ನು ತಾಬಾಕ್ಕೆ ತೆಗೆದುಕೊಳ್ಳಲಾಗಿದೆಯೆಂದೂ, ಅರ್ಜಿದಾರರು ಸರಾಯಿ ಸಾಗಾಟಕ್ಕೆ ಉಪಯೋಗಿಸಿದ ಜೀಪ್ ಸಂಖ್ಯೆ: ಜಿಎ-01/ಎ-7703 ನೇದನ್ನು ನೋಡಿದರೆ ಗುರ್ತಿಸುತ್ತೇನೆಂದೂ, ಈ ಬಗ್ಗೆ ಅರ್ಜಿದಾರರ ವಕೀಲರು ಜೀಪನ್ನು ಗುರ್ತಿಸುವುದರ ಬಗ್ಗೆ ತನ್ನ

ಆಕ್ಷೇಪಣೆ ಇರುವುದಿಲ್ಲವೆಂದು ತಿಳಿಸಿರುತ್ತಾರೆಂದೂ, ತನಿಖೆಯ ಅವಧಿಯಲ್ಲಿ ಅರ್ಜಿದಾರ/ ಆರೋಪಿ ತನ್ನ ವಾಹನ ಸಂಖ್ಯೆ: ಜಿಎ-01/ಎ-7703 ರಲ್ಲಿ ತಿಳಿದು ತಿಳಿದು ಅಬಕಾರಿ ಮಾಲನ್ನು ಸಾಗಿಸಿರುವುದು ತನಗೆ ತನಿಖಾ ಅವಧಿಯಲ್ಲಿ ಕಂಡು ಬಂದಿದೆಯೆಂದೂ, ಈಗ ಆರೋಪಿ/ ಅರ್ಜಿದಾರ ಅಕ್ರಮವಾಗಿ ಈ ವಾಹನದಲ್ಲಿ ಪಾಸ್ ಹಾಗೂ ಪರ್ಮಿಟ್ ಇಲ್ಲದೇ ಸರಾಯಿ ಸಾಗಾಟ ಮಾಡಿರುವುದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕುವಂತೆ ಪ್ರಾಧಿಕಾರದ ಮುಂದೆ ಪ್ರಾರ್ಥಿಸುತ್ತೇನೆ ಎಂದು ನುಡಿದಿರುತ್ತಾರೆ.

ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ, ಈ ವಾಹನದಲ್ಲಿ ಸರಾಯಿ ಸಾಗಾಟ ಮಾಡುತ್ತಿದ್ದ ಬಗ್ಗೆ ಖಚಿತವಾದ ಬಾತ್ಮಿ ಇರಲಿಲ್ಲವೆಂದೂ, ಅದೇ ವಾಹನದಲ್ಲಿ ಸರಾಯಿ ಸಾಗಾಟ ಮಾಡುತ್ತಿದ್ದರೆನ್ನುವ ಬಗ್ಗೆ ತನಗೆ ಮಾಹಿತಿ ಇತ್ತೆಂದೂ, ಆದರೆ ಆ ದಿನ ಇರಲಿಲ್ಲವೆಂದೂ, ವಾರೆಂಟ್ ಪಡೆದುಕೊಳ್ಳುವ ಅವಶ್ಯಕತೆ ಇರಲಿಲ್ಲವೆಂದೂ, ವಾರೆಂಟ್ ಪಡೆದುಕೊಳ್ಳಲು ತೊಂದರೆ ಇರಲಿಲ್ಲವೆಂದೂ, ವಾಹನವನ್ನು ಬ್ರಿಡ್ಜ್‌ನ ಈ ಕಡೆಗೆ ಅಂದರೆ ಕೋಡಿಬಾಗ ಬದಿಗೆ ಜಪ್ತು ಮಾಡಿದೆವೆಂದೂ, ವಾಹನವನ್ನು ಕಾಳಿ ಬ್ರಿಡ್ಜ್‌ನಿಂದ ಸುಮಾರು 300 ಮೀಟರ್ ಆಗಬಹುದಾದ ಸ್ಥಳದಲ್ಲಿ ಹಿಡಿದೆವೆಂದೂ, ಘಟನಾ ಸ್ಥಳದಿಂದ ಫಾರೆಸ್ಟ್ ಐ.ಬಿ. ಬಹಳ ದೂರದಲ್ಲಿದೆಯೆಂದೂ, ಬ್ರಿಡ್ಜ್‌ನಿಂದ ಫಾರೆಸ್ಟ್ ಐಬಿ ಎಷ್ಟು ದೂರದಲ್ಲಿದೆ ಎಂದು ಹೇಳಲು ಬರುವುದಿಲ್ಲವೆಂದೂ, ತಾನು ಎಫ್‌ಐಆರ್‌ನ್ನು ಬೆಳಿಗ್ಗೆ 7-00 ಗಂಟೆಗೆ ಮ್ಯಾಜಿಸ್ಟ್ರೇಟರಿಗೆ ಮುಟ್ಟಿಸಿದೆವೆಂದೂ, ಪೊಲೀಸ್ ಠಾಣೆಯಿಂದ ಮ್ಯಾಜಿಸ್ಟ್ರೇಟ್‌ರ ಮನೆ 5 ನಿಮಿಷದ ದಾರಿ ಎನ್ನುವ ಬಗ್ಗೆ ನಿರ್ದಿಷ್ಟವಾಗಿ ತನಗೇನು ಹೇಳಲು ಬರುವುದಿಲ್ಲವೆಂದೂ, ಈ ಪ್ರಕರಣದಲ್ಲಿ ಕ್ರಿಮಿನಲ್ ನ್ಯಾಯಾಲಯದಲ್ಲಿ ಪ್ರಕರಣವು ನಿರ್ದೋಷಿಯಾಗಿರುವ ಬಗ್ಗೆ ತನಗೆ ಯಾವುದೇ ಮಾಹಿತಿ ಇಲ್ಲವೆಂದೂ, ಪಂಚನಾಮೆ ಮಾಡಿದ ವಿಷಯ ಸುಳ್ಳು ಎನ್ನುವುದು ಸರಿಯಲ್ಲವೆಂದೂ, ಮಾರ್ಕೇಟ್‌ನಿಂದ ಜೀಪ್‌ನ್ನು ತೆಗೆದುಕೊಂಡು ಹೋಗಿದ್ದೇವೆ ಎನ್ನುವುದು ಸುಳ್ಳೆಂದೂ, ಆ ಜೀಪಿನಲ್ಲಿ ಯಾವತ್ತೂ ಸರಾಯಿ ಸಾಗಾಟ ಮಾಡಿಲ್ಲ ಎನ್ನುವುದು ಸರಿಯಲ್ಲವೆಂದೂ, ವಾರಸುದಾರರಿಲ್ಲದ ಮುದ್ದೆ ಮಾಲನ್ನು ಈ ಪ್ರಕರಣಕ್ಕೆ ಸೇರಿಸಿ ಸುಳ್ಳು ಪ್ರಕರಣ ಸೃಷ್ಟಿ ಮಾಡಿದ್ದೇವೆ ಎನ್ನುವುದು ಸರಿಯಲ್ಲವೆಂದೂ, ಈ ಪ್ರಕರಣಕ್ಕೂ ಮತ್ತು ಅರ್ಜಿದಾರರ ಜೀಪಿಗೂ ಯಾವುದೇ ಸಂಬಂಧವಿಲ್ಲ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

12. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಆರೋಪಿಯು ತಪ್ಪಿಸಿಕೊಳ್ಳಬಹುದೆಂಬ ಅಥವಾ ಮುದ್ದೆ ಮಾಲುಗಳನ್ನು ಪರಭಾರೆ ಮಾಡಬಹುದೆಂಬ ಅನುಮಾನವಿದ್ದಲ್ಲಿ ಅಂತಹ ಪ್ರಕರಣಗಳಲ್ಲಿ ಜಪ್ತಿ ವಾರೆಂಟ್ ಇಲ್ಲದೇ ಶೋಧನೆಗೈಯ್ಯಲು ಅನ್ವೇಷಣಾಧಿಕಾರಿಗಳಿಗೆ ಕ.ಅ. ಕಾಯ್ದೆ 1965ರ ಕಲಂ 54ರಂತೆ ಅಧಿಕಾರವಿರುತ್ತದೆ. ಜಪ್ತಿ ವಾರೆಂಟ್‌ನ್ನು ಪಡೆದುಕೊಳ್ಳದಿದ್ದುದು ಪಿರ್ಯಾದುದಾರರು ಕ.ಅ. ಕಾಯ್ದೆ ಕಲಂ 52 ಮತ್ತು 54ರ ಉಲ್ಲಂಘನೆಯಾಗುತ್ತದೆಯೇ ಹೊರತು ಇದೇ ಕಾರಣವನ್ನಿಟ್ಟುಕೊಂಡು ಜಪ್ತಿಯನ್ನು ನಿರಾಕರಿಸಲು ಬರಲಾರದು ಈ ಬಗ್ಗೆ ಮಾನ್ಯ ಉಚ್ಛ ನ್ಯಾಯಾಲಯದ ವಿಭಾಗೀಯ ಪೀಠದ ತೀರ್ಪು ಐಎಲ್‌ಆರ್ 2004 ಕೆಎಆರ್ 527 (ಶ್ರೀ ಸೋಮನಾಥ ಕರೆಬೈಲ್ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ) ರಲ್ಲಿ ಈ ಕೆಳಗಿನಂತೆ ಉಲ್ಲೇಖಿಸಲಾಗಿದೆ.

In the Case of a search of a vessel, raft, vehicle or animal, the offender will undoubtedly have the opportunity to escape if the officer proposing to conduct the search were to approach a Magistrate to obtain a search warrant before actually conducting the search. That is so, particularly when illicit transport of excisable goods more often than not takes place at odd hours of the day and night to avoid detection, Such offenders are nabbed in the course of routine checks or on the basis of source information received by the excise authorities. To say that a search of a vehicle. Vessel, raft or animal can be conducted only after obtaining a warrant may therefore be unrealistic and may potentially defeat the very object underlying the excise legislation. That is because in the case of excisable goods that are in a state of motion, any delay which is implicit in an attempt to get a search warrant will give the Offender the opportunity to escape or destroy the evidence regarding the offence.

Failure to record in black and white what is obvious may not therefore by itself constitute an illegality so as to render the search or the subsequent proceedings based on the same illegal. Such failure may be only procedural irregularity not affecting the validity of the search.

The seizure of the goods while the same were in motion or were capable of being put into motion should sufficiently satisfy the conscience of the law that no prejudice on account of non recording of the reasons for not obtaining warrant has been caused.

ಈ ಪ್ರಕರಣದಲ್ಲಿ ಪಂಚ ಸಾಕ್ಷಿದಾರರಿಬ್ಬರೂ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುವುದರಿಂದ ಸ್ವತಂತ್ರ ಪಂಚರನ್ನು ಬಳಸಿಕೊಂಡಿಲ್ಲ ಎನ್ನುವ ವಾದವು ಸರಿಯಲ್ಲ. ಅಲ್ಲದೇ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದೂ ಈ ಬಗ್ಗೆ ನಮ್ಮ ಗೌರವಾನ್ವಿತ ಉಚ್ಛನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್.ವಿಜಯ ಕುಮಾರ ವಿರುದ್ಧ ಡೆಪ್ಯೂಟಿ ಕನ್ಸ್‌ರ್ವೇಟರ್ ಆಫ್ ಫಾರೆಸ್ಟ್ ಹಾಸನ (ಐಎಲ್‌ಆರ್-2002, ಕೆ.ಎ.ಆರ್.1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ. ಈ ಆದೇಶವನ್ನು ಈ ಪ್ರಕರಣದಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ.

Rejecting the Contention of the owner of the seized vehicle that non-filing of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation.

ಪಂಚನಾಮೆ ಮಾಡಿದ ವಿಷಯವು ಸುಳ್ಳು ಎನ್ನುವುದಕ್ಕೆ ಯಾವುದೇ ಆಧಾರವಿಲ್ಲ. ಮಾರ್ಕೇಟಿನಿಂದ ಜೀಪ್‌ನ್ನು ತೆಗೆದುಕೊಂಡು ಹೋದ ಬಗ್ಗೆ ಎದುರುದಾರರ ಪಕ್ಷದವರು ಯಾವುದೇ ದಾಖಲೆಯನ್ನು ಸಲ್ಲಿಸಿಲ್ಲ. ವಾರಸುದಾರರಿಲ್ಲದ ಮುದ್ದೆಮಾಲನ್ನು ಜಪ್ತು ಮಾಡಿದಾಗ ಆ ಬಗ್ಗೆ ಗುನ್ಹೆ ದಾಖಲಿಸಿ, ತನಿಖೆ ನಡೆಸುವ ಅಧಿಕಾರವು ಇರುವಾಗ ಇದೇ ಆರೋಪಿಯ ಮೇಲೆ ಆರೋಪ ಹೊರಿಸಲು ಫಿರ್ಯಾದಿಕಡೆಯವರಿಗೂ ಮತ್ತು ಆರೋಪಿಗೂ ಇರುವ ದ್ವೇಷ ಅಥವಾ ವೈಮನಸ್ಸು ಏನೆಂಬುದರ ಬಗ್ಗೆ ವಿವರಿಸಿಲ್ಲ. ಪಿ.ಡಬ್ಲ್ಯೂ-2ನೇ ಯವರಾದ ಈ ಪ್ರಕರಣದ ಪಂಚಸಾಕ್ಷಿ ನಂ.1 ನೇಯವರಾದ ಪರೇಶ ಗಂಗಾಧರ ನಾಯ್ಕ ಇವರು ಪ್ರತಿಕೂಲ ಸಾಕ್ಷಿಯನ್ನು ನುಡಿದಿದ್ದರೂ ಸಹ ಮಾನ್ಯ ಎಡಿಪಿಯವರ ಪಾಟಿ ಸವಾಲಿನಲ್ಲಿ ಆರೋಪಿತ ಅರ್ಜಿದಾರನು ತನಗೆ ಕಳೆದೆರಡು ವರ್ಷಗಳಿಂದ ಪರಿಚಯವನಿರುತ್ತಾನೆಂದೂ, ಅವರು ಟೈಲರ್ ವೃತ್ತಿ ಮಾಡುವುದರಿಂದ ತಾನು ಅವರ ಹತ್ತಿರ

ಯಾವಾಗಲೂ ಬಟ್ಟೆ ಹೊಲಿಯಲು ಕೊಡುತ್ತೇನೆಂದೂ, ಬಟ್ಟೆ ಹೊಲಿಯುವ ಮತ್ತು ತೆಗೆದುಕೊಳ್ಳುವ ಅವರ ಮತ್ತು ತನ್ನ ವ್ಯವಹಾರ ಚೆನ್ನಾಗಿದೆಯೆಂದೂ, ತನ್ನ ಸಾಕ್ಷಿಯಾಗುವ ಪೂರ್ವದಲ್ಲಿ ತಾನು ಅರ್ಜಿದಾರ ಆರೋಪಿತನ ಜೊತೆಗೆ ಮಾತುಕತೆ ನಡೆಸಿದ್ದೇನೆಂದೂ, ತನಗೆ ಇಂಗ್ಲೀಷ್ ಗೊತ್ತಿದೆಯೆಂದೂ, ಆದರೆ ವ್ಯವಹಾರ ಜ್ಞಾನ ಇದೆಯೆಂದೂ, ತಾನು ಮೆಟ್ರಿಕ್ ತರಗತಿಯವರೆಗೆ ಓದಿದ್ದೇನೆಂದೂ, ತಾನು ಯಾವುದೇ ದಾಖಲೆಗಳನ್ನು ಸಹಿ ಮಾಡುವಾಗ ಮೊದಲು ಅದನ್ನು ಓದಿ ಅದರಲ್ಲಿರುವ ಮಜಕೂರ ಸರಿ ಇದ್ದಲ್ಲಿ ಮಾತ್ರ ಸಹಿ ಮಾಡುತ್ತೇನೆಂದೂ, ಪೊಲೀಸ್‌ರು ತನ್ನ ಸಹಿ ತೆಗೆದುಕೊಳ್ಳುವ ಪೂರ್ವದಲ್ಲಿ ತನಗೆ ಹೆದರಿಸಿ ಸಹಿ ತೆಗೆದುಕೊಂಡಿರುತ್ತಾರೆಂದೂ, ಈ ಬಗ್ಗೆ ಅವರ ಮೇಲಾಧಿಕಾರಿಗಳಿಗೆ ದೂರನ್ನು ನೀಡಿರುವುದಿಲ್ಲವೆಂದೂ, ನಂತರ ಅರ್ಜಿದಾರರ ಪರ ವಕೀಲರ ಮರು ಸವಾಲಿನಲ್ಲಿ ತನಗೆ ಕನ್ನಡ ಓದಲು ಮತ್ತು ಬರೆಯಲು ಬರುವುದಿಲ್ಲವೆಂದೂ, ತನ್ನದು ಮತ್ತು ಅರ್ಜಿದಾರರದು ಖಾಸಾ ದೋಸ್ತಿ ಇರುವುದಿಲ್ಲವೆಂದೂ, ಕನ್ನಡ ಓದಲು ಬರದೇ ಇದ್ದುದರಿಂದ ಸಹಿ ಮಾಡಲು ಹೇಳಿದಾಗ ಸಹಿ ಮಾಡಿದೆ ಎಂದು ನುಡಿದಿರುತ್ತಾರೆ. ಹೀಗಾಗಿ ಸದರಿ ಸಾಕ್ಷಿದಾರರು ಅರ್ಜಿದಾರರಿಗೆ ಸಹಾಯ ಮಾಡುವ ಉದ್ದೇಶದಿಂದ ಸರಿಯಾದ ಸಾಕ್ಷಿಯನ್ನು ನುಡಿಯದಿರುವುದು ಕಂಡು ಬರುತ್ತದೆ. ಮಾನ್ಯ ಉಚ್ಚ ನ್ಯಾಯಾಲಯದ ಸನ್ಮಾನ್ಯ ಜಸ್ಟೀಸ್ ರಾಮಣ್ಣ ಜೆ. ರವರು ತನ್ನ ಇತ್ತೀಚಿನ ತೀರ್ಪಿನಲ್ಲಿ ಪಂಚಸಾಕ್ಷಿದಾರರುಗಳು ಪ್ರಕರಣದಲ್ಲಿ ಪ್ರತಿಕೂಲ ಸಾಕ್ಷಿಯನ್ನು ನುಡಿದಲ್ಲಿ ಅದು ಅಬಕಾರಿ ಮುಟ್ಟುಗೋಲು ಪ್ರಕರಣಕ್ಕೆ ಧಕ್ಕೆಯಾಗುವುದಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಹೀಗಾಗಿ ಪ್ರಕರಣದ ಪಂಚರು ಪ್ರಾಧಿಕಾರದಲ್ಲಿ ಅಭಿಯೋಜನೆಯ ಪಕ್ಷಕ್ಕೆ ಪೂರಕವಾಗಿ ಅಥವಾ ಪ್ರತಿಕೂಲ ಸಾಕ್ಷಿ ನುಡಿದಲ್ಲಿ ಅಥವಾ ಸಾಕ್ಷಿ ನುಡಿಯಲು ಹಾಜರಾಗದಿದ್ದಲ್ಲಿ ಅಂತಹ ಸಾಕ್ಷಿಯನ್ನು ಪರಿಗಣನೆಗೆ ತೆಗೆದುಕೊಳ್ಳದಿರುವುದು ಸೂಕ್ತವೆಂದು ನನ್ನ ಅಭಿಪ್ರಾಯವಾಗಿದೆ. ಈ ಎಲ್ಲಾ ಕಾರಣಗಳಿಂದಾಗಿ ಅಭಿಯೋಜನೆ ಪಕ್ಷದವರು ಈ ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

13. ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕರು ತನ್ನ ಮುಗ್ಧತೆಯನ್ನು ಸಾಬೀತುಪಡಿಸಲು ಅವಕಾಶವಿದ್ದಾಗಲೂ ಸಹ ತನ್ನ ಯಾವುದೇ ರೀತಿಯ ಹೇಳಿಕೆಯನ್ನು ನೀಡದಿರುವುದನ್ನು ಗಮನಿಸಿದಾಗ ಈ ಕೃತ್ಯವನ್ನು ಆತನು ಒಪ್ಪಿಕೊಂಡಂತಾಗುತ್ತದೆ. ಅಲ್ಲದೇ ಗೌರವಾನ್ವಿತ ಉಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಜನ್ ಪಿಟೀಷನ್ ನಂ.338 ಆಫ್ 2000, ದಿನಾಂಕ: 01.10.2002 (ಅಬಕಾರಿ ನಿರೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ಇತರರು ವಿರುದ್ಧ ಪಿ. ವೆಂಕಟರಮಣ) ರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

"A close reading of conditions would imply that the person incharge of the vehicle if he were to misuse the vehicle for illegal transporting directely by himself or allowing others conciously, the owner becomes vicariously lible for the acts and he has to suffer the grave consequences of confiscation. The said excuse is not a ground to exonerate from the consequence of confiscation under section 43A (2) of the Act Confiscation."

ಈ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನ ಯಾರ ವಶದಲ್ಲಿತ್ತೋ ಅವರ ಗಮನಕ್ಕೆ ಬಾರದೇ ಮತ್ತು ಅವರು ಶಾಮೀಲಾಗದೇ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬುದನ್ನು ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಲು ವಿಫಲರಾಗಿರುವುದು ಕಂಡುಬರುತ್ತದೆ.

14. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಮದ್ಯ ಮತ್ತು ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 181/2001 ದಿನಾಂಕ: 05.10.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 02/ 2002 ದಿನಾಂಕ: 14.02.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 107/ 2003, ದಿನಾಂಕ: 13.04.2005 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಾರವಾರ ಶಹರ ಪೊಲೀಸ್ ಠಾಣೆಯ ಗುನ್ನೆ ಸಂಖ್ಯೆ: 265/ 2001 ದಿನಾಂಕ: 22.12.2001ರಲ್ಲಿ ಜಪ್ತಿಯಾದಂತಹ ಒಂದು ಜೀಪ್ ಸಂಖ್ಯೆ: ಜಿಎ-01/ ಎ-7703 ನೇದನ್ನು ಹೈವಾರ್ಡ್ಸ್ ವಿಸ್ಕಿಯ 750 ಮಿ.ಲೀ.ನ 24 ಸೀಸೆಗಳು ಮತ್ತು 20 ಲೀಟರ್ ಗೋವಾ ಸರಾಯಿ ಇದ್ದ ಒಂದು ಕ್ಯಾನನ್ನು (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಸೀಸೆಗಳನ್ನು ಹೊರತುಪಡಿಸಿ) ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ. ಮುಟ್ಟುಗೋಲು ಹಾಕಿಕೊಂಡ ಚಿಲ್ಲರೆ ಗೋವಾ ಸರಾಯಿಯು ಕರ್ನಾಟಕ ರಾಜ್ಯದಲ್ಲಿ ಮಾರಾಟಕ್ಕೆ ಅನುಮೋದನೆ ಪಡೆಯದಿರುವುದರಿಂದ ಅದನ್ನು ಅಬಕಾರಿ ಉಪ ಅಧೀಕ್ಷಕರು, ಉಪವಿಭಾಗ, ಕಾರವಾರ ರವರ ಸಮಕ್ಷಮ ನಾಶಪಡಿಸಲು ಹಾಗೂ ಖಾಲಿ ಕ್ಯಾನನ್ನು ಮತ್ತು ಹೈವರ್ಡ್ಸ್ ವಿಸ್ಕಿಯ ಬಾಟ್ಲಿಗಳನ್ನು ಕೆ.ಎಸ್.ಬಿ.ಸಿ.ಎಲ್. ಪ್ರತಿನಿಧಿಯ ಸಮಕ್ಷಮ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಿ, ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಲು ಕಲಂ 43ಎ(4)ರಂತೆ ಅಬಕಾರಿ ನಿರೀಕ್ಷಕರು, ಕಾರವಾರ ವಲಯ ಇವರಿಗೆ ಆದೇಶಿಸಿದೆ.

ಈ ಪ್ರಕರಣದಲ್ಲಿ ಜಪ್ತಿಯಾದ ಜೀಪ್‌ನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಈ ಆದೇಶವು ಅರ್ಜಿದಾರರಿಗೆ ತಲುಪಿದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2005ನೇ ಇಸ್ವಿಯ ಮೇ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಎ.ಎಸ್. ವಿಶ್ವರೂಪ**

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ.1: ಕೆ. ರಾಮರಾವ್, ಸಿ.ಪಿ.ಐ.

ಪ್ರಾ.ಸಾ.ನಂ.2: ಪರೇಶ ಗಂಗಾಧರ ನಾಯ್ಕ.

ಪ್ರಾ.ಸಾ.ನಂ.3: ವಿಲಾಸ ಆನಂದು ನಾಯ್ಕ.

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

-ಇಲ್ಲಾ-

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ1 : ಪ್ರ.ಮಾ. ವರದಿ ಪಂಚನಾಮೆ.

ನಿಶಾನೆ ಪಿ1ಎ : ಫಿರ್ಯಾದಿಯ ಸಹಿ.

ನಿಶಾನೆ ಪಿ2 : ಪಂಚನಾಮೆ.

ನಿಶಾನೆ ಪಿ2ಎ : ಫಿರ್ಯಾದಿಯ ಸಹಿ.

ನಿಶಾನೆ ಪಿ2ಬಿ: ಪಂಚಸಾಕ್ಷಿ ನಂ.1ನೇಯವರ ಸಹಿ.

ನಿಶಾನೆ ಪಿ2ಸಿ: ಪಂಚಸಾಕ್ಷಿ ನಂ.2 ನೇಯವರ ಸಹಿ.

ನಿಶಾನೆ ಪಿ3 : ರಾಸಾಯನಿಕ ವಿಶ್ಲೇಷಣಾ ವರದಿ.

ನಿಶಾನೆ ಪಿ3ಎ : ತನಿಖಾಧಿಕಾರಿಯ ಸಹಿ.

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಎ.ಎಸ್. ವಿಶ್ವರೂಪ**

ಪಿ.ಆರ್.1545 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅಧೀಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ನಂ. ಅಬಕಾರಿ/ ಸಿಆರ್‌ಎಂ/ ಡಿಟಿಸಿಆರ್/ 91/ 2002-03, ದಿನಾಂಕ:31ನೇ ಮೇ, 2005**

**ಉಪಸ್ಥಿತರು:** ಶ್ರೀ ಎಸ್.ವಿಶ್ವರೂಪ, ಕೆ.ಇ.ಎಸ್.
ಅಧೀಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು :** ಶ್ರೀ ಎಸ್.ಎಸ್. ಸಾರಂಗ.
ಅಬಕಾರಿ ಉಪ ನಿರೀಕ್ಷಕರು, ಗುಪ್ತವಾರ್ತಾ ವಿಭಾಗ, ಕಾರವಾರ.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ)

**ವಿರುದ್ಧ**

**ಅರ್ಜಿದಾರರು :** ಹರೀಶ್ ತಂದೆ: ಬಂಗಾರಪ್ಪ ಸಿರ್ಸಿಕರ
ಸಾ: ಶಿರಾಲಿ ಭಟ್ಕಳ.
(ಶ್ರೀ ಎಸ್.ವಿ. ಯಾಜಿ, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)

**ತೀರ್ಪು**

1. ಅಬಕಾರಿ ಉಪ ನಿರೀಕ್ಷಕರು, ಗುಪ್ತ ವಾರ್ತಾ ವಿಭಾಗ ಕಾರವಾರ ಇವರು ದಿನಾಂಕ: 13.12.2002 ರಂದು ಮಧ್ಯಾಹ್ನ 1.30 ಗಂಟೆಯ ಸಮಯಕ್ಕೆ ಭಟ್ಕಳ ತಾಲ್ಲೂಕಿನ ಮುರ್ಡೇಶ್ವರ ಹತ್ತಿರ ರಾಷ್ಟ್ರೀಯ ಹೆದ್ದಾರಿ ನಂ.17ರ ಮೇಲೆ ಖಚಿತ ಸುಳುವಿನ ಮೇರೆಗೆ ವಾಹನ ತಪಾಸಣೆ ಮಾಡುತ್ತಿರುವಾಗ ಹೊನ್ನಾವರ ಕಡೆಯಿಂದ ಬರುತ್ತಿದ್ದ ಮಹೀಂದ್ರಾ ಜೀಪ್ ನಂ.ಸಿಎನ್‌ಇ-3694 ನೇದನ್ನು ತಪಾಸಿಸಲಾಗಿ ಅದರಲ್ಲಿ ಅಕ್ರಮವಾಗಿ ಪ್ರತಿಯೊಂದರಲ್ಲಿ 30 ಲೀಟರ್‌ನಂತೆ ಒಟ್ಟೂ ಎರಡು ಮೋಟಾರ್ ಟ್ಯೂಬುಗಳಲ್ಲಿ 60 ಲೀಟರ್ ಹಾಗೂ ಇನ್ನೊಂದು ಟ್ಯೂಬ್‌ನಲ್ಲಿ 40 ಲೀಟರ್ ಕಳ್ಳಭಟ್ಟಿ ಸರಾಯಿಯನ್ನು ಸಾಗಿಸುತ್ತಿದ್ದುದನ್ನು ಪತ್ತೆ ಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11 ಮತ್ತು 14 ರಂತೆ ಅಪರಾಧವಾಗಿದ್ದು, ಕಲಂ 34 ಮತ್ತು 35ಎ ರನ್ವಯ ಶಿಕ್ಷಾರ್ಹವಾಗಿರುವುದಾಗಿ ತಿಳಿಸುತ್ತಾ, ವಾಹನ ಮತ್ತು ಕಳ್ಳಭಟ್ಟಿ ಸರಾಯಿಯ ಸ್ವತ್ತುಗಳನ್ನು ಜಪ್ತಿ ಮಾಡಿ ಈ ಪ್ರಕರಣಕ್ಕೆ ಸಂಬಂಧಿಸಿದ ಪ್ರ.ಮಾ.ವರದಿ, ಪಂಚನಾಮೆ ಮತ್ತು ಸ್ವತ್ತಿನ ಪಟ್ಟಿಗಳನ್ನು ಈ ಪ್ರಾಧಿಕಾರಕ್ಕೆ ಮುಂದಿನ ಕ್ರಮಕ್ಕಾಗಿ ಗುಪ್ತ ವಾರ್ತಾ ವಿಭಾಗದ ಅಬಕಾರಿ ಉಪ ನಿರೀಕ್ಷಕರ ಗುನ್ನೆ ಸಂಖ್ಯೆ: ಇಎಕ್ಸ್‌ಇ/ ಇಐಬಿ/ ಎಸ್‌ಐಇ-3/ ಎಫ್‌ಐಆರ್-4/ 2002-03, ದಿನಾಂಕ: 13.12.2002 ರಂತೆ ಸಲ್ಲಿಸಿರುತ್ತಾರೆ.

2. ದಿನಾಂಕ:28.12.2002ರಂದು ಶ್ರೀ ಎಸ್.ವಿ. ಯಾಜಿ, ವಕೀಲರು, ಕಾರವಾರ ಇವರು ಈ ಪ್ರಾಧಿಕಾರದಲ್ಲಿ ಅರ್ಜಿ ಸಲ್ಲಿಸುತ್ತಾ, ವಾಹನದ ದಾಖಲೆಗಳ ದೃಢೀಕೃತ ನಕಲನ್ನು ಲಗತ್ತಿಸಿ, ಹರೀಶ ಬಂಗಾರಪ್ಪ, ಸಿರ್ಸಿಕರ, ಸಾ: ಶಿರಾಲಿ, ಭಟ್ಕಳ ಇವರು ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕರಾಗಿರುವುದಾಗಿ ತಿಳಿಸಿ ಪ್ರಮಾಣ ಪತ್ರವನ್ನು ಲಗತ್ತಿಸುತ್ತಾ, ಸದರಿ ವಾಹನವನ್ನು ಆರ್ಥಿಕ ಸಂಸ್ಥೆಯಿಂದ ಸಾಲ ಪಡೆದು ಅರ್ಜಿದಾರನು ಖರೀದಿಸಿದ್ದು, ಸದರಿ ಅರ್ಜಿದಾರನು ಬಡವ ಹಾಗೂ ಮುಗ್ಧ ವ್ಯಕ್ತಿಯಾಗಿದ್ದು, ಆತನು ಯಾವುದೇ ಅಪರಾಧವನ್ನು ಎಸಗಿಲ್ಲವೆಂದೂ, ಈ

ವಾಹನವು 1988ರ ಮಾದರಿಯ ಹಳೆಯ ವಾಹನವಾಗಿದ್ದು, ಸಧ್ಯ ಈ ವಾಹನವನ್ನು ಮಳೆ, ಗಾಳಿಯಲ್ಲಿ ತೆರೆದ ವಾತಾವರಣದಲ್ಲಿ ಇಟ್ಟಿದ್ದು, ಅದನ್ನು ಹಾಗೆಯೇ ಇಟ್ಟಲ್ಲಿ ನಿಷ್ಪ್ರಯೋಜಕವಾಗಿ ಅದು ಹಾಗೆಯೇ ಇಟ್ಟಲ್ಲಿ ಅರ್ಜಿದಾರನಿಗೆ ನಷ್ಟ ಉಂಟಾಗುವುದೆಂದೂ, ಅರ್ಜಿದಾರನು ತನ್ನ ಕುಟುಂಬದ ಸದಸ್ಯರನ್ನು ಸಾಕುತ್ತಿದ್ದು, ಸದರಿ ವಾಹನದ ಬೆಲೆಯು ರೂ.50,000/- ಗಳಷ್ಟಾಗುವುದರಿಂದ ಅದನ್ನು ಜಾಮೀನು ಅಥವಾ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಬೇಕೆಂದು ವಿನಂತಿಸಿರುತ್ತಾರೆ.

3. ಈ ಪ್ರಕರಣದಲ್ಲಿ ಜಪ್ತಿಯಾದಂತಹ ವಾಹನವನ್ನು ಮತ್ತು ಮದ್ಯದ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕ.ಅ. ಕಾಯ್ದೆ 1965ರ ಕಲಂ 43(ಬಿ)(1)ಎ ಪ್ರಕಾರ ಕಾರಣ ಕೇಳಿ ನೋಟೀಸನ್ನು ದಿನಾಂಕ: 26.02.2003ರಂದು/ ಅರ್ಜಿದಾರ/ ವಾಹನದ ಮಾಲೀಕರಿಗೆ ಜಾರಿ ಮಾಡಲಾಗಿ, ಆತನು ಅದಕ್ಕೆ ತನ್ನ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ.

4. ಈ ಪ್ರಾಧಿಕಾರದ ಆದೇಶ ದಿನಾಂಕ:26.02.2003ರಂತೆ ವಾಹನದ ಮಧ್ಯಂತರ ವಶದ ಬಿಡುಗಡೆಯ ಬಗ್ಗೆ ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಲಾಗಿರುತ್ತದೆ.

5. ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಉಪ ವಲಯ, ಭಟ್ಕಳ ಇವರು ತಮ್ಮ ಪತ್ರ ಸಂಖ್ಯೆ:ಅಬಕಾರಿ/ ಉವ/ ಸಿಆರ್ಎಂ/ ರಾವ/ 01/ 2003-04, ದಿನಾಂಕ:18.05.2004ರಂತೆ ಈ ಪ್ರಕರಣದಲ್ಲಿ ತೆಗೆಯಲಾದ ಮಾದರಿ ಸೀಸೆಗಳ ಬಗೆಗಿನ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು ಕ್ರಮವಾಗಿ ಶೇಕಡಾ 59.2% ಮತ್ತು 76% ಯು.ಪಿ. ಯಷ್ಟು ಇರುತ್ತದೆಯಾಗಿ ಮತ್ತು ಅವು ಮಾನವನ ಸೇವನೆಗೆ ಯೋಗ್ಯವಿರುವುದಿಲ್ಲವಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

6. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿ.ಆರ್.ಪಿ.ಸಿ. ಕಲಂ 207ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 34 ಮತ್ತು 38ಎ ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ, ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯು 1 ರಿಂದ 4ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ.1 ರಿಂದ 3 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿ ನಂ.1 ನೇಯವರಾದ ರಾಜು ತಿಮ್ಮಪ್ಪ ನಾಯ್ಕ, ಸಾ:ಗುಣವಂತೆ, ಹೊನ್ನಾವರ ಹಾಗೂ ಪಂಚ ಸಾಕ್ಷಿ ನಂ.2 ನೇಯವರಾದ ಕೃಷ್ಣ ಕೂಲ್ಲೂರ ನಾಯ್ಕ, ಸಾ: ಗುಣವಂತೆ, ಹೊನ್ನಾವರ ಇವರು ಪ್ರತಿಕೂಲ ಸಾಕ್ಷಿಯನ್ನು ನುಡಿದಿರುತ್ತಾರೆ.

7. ಪಿ.ಡಬ್ಲ್ಯೂ-1 ಮತ್ತು 3ನೇಯವರ ಹೇಳಿಕೆಗಳು ಹಾಗೂ ಅಭಿಯೋಜನೆಪರ ಸಲ್ಲಿಸಲಾಗಿದ್ದ ಲಿಖಿತ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯು 1ರಂತೆ ಪಡೆದುಕೊಳ್ಳಲಾಯಿತು. ಅರ್ಜಿದಾರರ ಪರ ವಕೀಲರು ಈ ಪ್ರಕರಣದಲ್ಲಿ ಆರೋಪಿಯು ಕ್ರಿಮಿನಲ್ ನ್ಯಾಯಾಲಯದಲ್ಲಿ ನಿರ್ದೋಷಿಯಾಗಿರುವ ಬಗ್ಗೆ ತೀರ್ಪನ್ನು ದಿನಾಂಕ: 06.10.2004ರಂದು ಈ ಪ್ರಾಧಿಕಾರದಲ್ಲಿ ಸಲ್ಲಿಸಿರುತ್ತಾರೆ.

8. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಹಾಗೂ ಅರ್ಜಿದಾರರ ಪರವಾಗಿ ಶ್ರೀ ಎಸ್.ವಿ. ಯಾಜಿ, ವಕೀಲರು ಕಾರವಾರ ರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**9. ವಿವಾದಾಂಶಗಳು:**

1. ದಿನಾಂಕ:13.12.2002ರಂದು ಮಧ್ಯಾಹ್ನ 1.30 ಗಂಟೆಯ ಸಮಯಕ್ಕೆ ಭಟ್ಕಳ ತಾಲ್ಲೂಕಿನ ಮುರ್ಡೇಶ್ವರ ಹತ್ತಿರ ರಾಷ್ಟ್ರೀಯ ಹೆದ್ದಾರಿ ನಂ.17ರ ಮೇಲೆ ಆರೋಪಿತನು ತನ್ನ ಮಹೀಂದ್ರಾ ಜೀಪ್ ಸಂಖ್ಯೆ: ಸಿಎನ್‌ಇ-3694 ನೇದರಲ್ಲಿ ಎರಡು ಟ್ಯೂಬುಗಳಲ್ಲಿ 30 ಲೀಟರ್‌ನಂತೆ ಒಟ್ಟು 60 ಲೀಟರ್ ಹಾಗೂ ಇನ್ನೊಂದು ಟ್ಯೂಬಿನಲ್ಲಿ 40 ಲೀಟರ್ ಕಳ್ಳಭಟ್ಟಿ ಸರಾಯಿಯನ್ನು ಆರೋಪಿಯು ಅನಧೀಕೃತವಾಗಿ ಸಾಗಿಸಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 34 ಮತ್ತು 38ಎ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಮಾಡಿದ್ದಾರೆಂದು ಅಭಿಯೋಜನೆ ಪಕ್ಷದವರು ನಿಸ್ಸಂಶಯವಾಗಿ ರುಜುವಾತುಪಡಿಸುತ್ತಾರೆಯೇ, ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು**

ಅಂಶ 1: ಸಕಾರಾತ್ಮಕವಾಗಿ.

ಅಂಶ 2: ನಕಾರಾತ್ಮಕವಾಗಿ.

ಅಂಶ 3: ಸಕಾರಾತ್ಮಕವಾಗಿ.

**ಕಾರಣಗಳು**

10. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಸುರೇಶ್ ಎಸ್. ಸಾರಂಗ, ಅಬಕಾರಿ ಉಪ ನಿರೀಕ್ಷಕರು ಪ್ರಾಧಿಕಾರದಲ್ಲಿ ದಿನಾಂಕ: 07.07.2004ರಂದು ಹಾಜರಾಗಿ ಪಿ.ಡಬ್ಲ್ಯೂ 1 ರಂತೆ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಸರಿಯಾಗಿಯೇ ಉತ್ತರಿಸಿ ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿಕೊಂಡಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ, ಭಟ್ಕಳಕ್ಕೆ ತಾವು ಗುನ್ನೆಯ ಮಾಹಿತಿ ಇದ್ದುದರಿಂದ ಹೋಗಿದ್ದೇವೆಂದೂ, ತಾವು ಭಟ್ಕಳದಲ್ಲಿದ್ದಾಗ ಮುರ್ಡೇಶ್ವರದಲ್ಲಿ ಒಂದು ಗುನ್ನೆಯಾಗಿದೆ ಅಂತಾ ಬಾತ್ಮಿ ಬಂತೆಂದೂ, ಮುರ್ಡೇಶ್ವರದಿಂದ ಭಟ್ಕಳ ಸುಮಾರು 25 ಕಿ.ಮೀ. ದೂರವಿರುತ್ತದೆಂದೂ, ಮುರ್ಡೇಶ್ವರದಿಂದ ಭಟ್ಕಳಕ್ಕೆ ಹೋಗುವ ನಡುವೆ ಸಾಕಷ್ಟು ಊರುಗಳಿವೆಂದೂ, ಪಂಚನಾಮೆಯಲ್ಲಿ ಬರೆದಿದ್ದು

ಸರಿಯಿರುತ್ತದೆಂದೂ, ಭಟ್ಕಳದಿಂದ ಮುರ್ಡೇಶ್ವರಕ್ಕೆ ತಾನು, ತನ್ನ ಸಿಬ್ಬಂದಿ ಹಾಗೂ ಪಂಚರೊಂದಿಗೆ ಬಂದೆನೆಂದೂ, ಪಂಚರ ಭಟ್ಕಳ ತಾಲ್ಲೂಕಿನ ಹಳ್ಳಿಯವರು, ಪಂಚನಾಮೆಯಲ್ಲಿ ಯಾವುದೇ ರೀತಿಯ ಅವ್ಯವಹಾರಗಳು ನಡೆದಿಲ್ಲ ಎಂದು ಬರೆದಿದ್ದು ನಿಜ, ಇದಕ್ಕೆ ನೀಡುವ ವಿವರಣೆ ಏನೆಂದರೆ ಯಾವುದೇ ರೀತಿಯ ಗಲಾಟೆ ಬೇರೆ ಆಗಿರುವುದಿಲ್ಲ ಎಂದು ಹೇಳುತ್ತೇನೆಂದೂ, ಹೊಡೆ ಬಡೆಯುವುದಕ್ಕೆ ವ್ಯವಹಾರ ಎನ್ನುವುದಿಲ್ಲವೆಂದೂ, ಹೊಡೆದಾಟ ಬಡೆದಾಟ ಮಾಡುವಂತಹದು ಒಂದು ಗುನ್ಹೆ ಹೊಡೆದಾಟ ಬಡೆದಾಟ ಆಗದೇ ಹೋದರೆ ಯಾವುದೇ ರೀತಿಯ ಗುನ್ಹೆ ಆಗಿರುವುದಿಲ್ಲ ಅಂತಾ ಹೇಳುತ್ತೇನೆಂದೂ, ಭಟ್ಕಳದಿಂದ ಹೊನ್ನಾವರ 48 ಕಿ.ಮೀ. ದೂರವಿರುತ್ತದೆಂದೂ, ಹೊನ್ನಾವರದಿಂದ ಗುಣವಂತೆ 8 ರಿಂದ 10 ಕಿ.ಮೀ. ಆಗಿರುತ್ತದೆಂದೂ, ಹೊನ್ನಾವರ ತಾಲ್ಲೂಕಿನ ಮರಗಳಿಯಲ್ಲಿ ಕಳ್ಳಭಟ್ಟಿ ಸರಾಯಿ ತಯಾರಾಗುತ್ತದೆ ಎನ್ನುವುದು ತಮ್ಮ ಇಲಾಖೆಯ ದಾಖಲೆಯ ಪ್ರಕಾರ ಸರಿ, ಮುಗಳಿ ಮಜರೆಯು ಗುಣವಂತೆ ಗ್ರಾಮಕ್ಕೆ ಸೇರುತ್ತದೆಂದೂ, ಪಂಚನಾಮೆ ವೇಳೆಗೆ ಗುಣವಂತೆ ಗ್ರಾಮದ ಯಾರು ಇರಲಿಲ್ಲವೆಂದು ನುಡಿದಿರುತ್ತಾರೆ. ದಿನಾಂಕ: 13.12.2002ರಂದು ತಾವು ಮುರ್ಡೇಶ್ವರಕ್ಕೆ ಹೋದದ್ದು ಇಲ್ಲವೆನ್ನುವ ಬಗ್ಗೆಯಾಗಲೀ, ಆರೋಪಿಯಾಗಲೀ, ಆರೋಪಿಯ ವಾಹನ ಕಂಡು ಬಂದಿದ್ದು ಇಲ್ಲವೆಂಬ ಬಗ್ಗೆಯಾಗಲೀ, ವಾಹನ ಹಾಗೂ ವಾಹನದಲ್ಲಿ ಯಾವುದೇ ರೀತಿಯ ಮುದ್ದೆ ಮಾಲಿನ ಪಂಚನಾಮೆ ಮಾಡಿದ್ದು ಇಲ್ಲವೆನ್ನುವುದು ಸರಿಯಲ್ಲವೆಂದೂ, ವಾರಸುದಾರರಿಲ್ಲದ ಮುದ್ದೆಮಾಲನ್ನು ಈ ಪ್ರಕರಣಕ್ಕೆ ಸೇರಿಸಿ ಸುಳ್ಳು ಗುನ್ಹೆ ದಾಖಲಿಸಿದ್ದೇವೆ ಎನ್ನುವುದು ಸರಿಯಲ್ಲವೆಂದೂ, ಆಪಾದಿತನು ತನ್ನ ವಾಹನದಲ್ಲಿ ಸರಾಯಿಯನ್ನು ಸಾಗಾಟ ಮಾಡಿರುವುದಿಲ್ಲ ಅನ್ನುವುದು ಸರಿಯಲ್ಲ ಮತ್ತು ಸ್ವಾಧೀನಕ್ಕೆ ಇಟ್ಟುಕೊಳ್ಳಲಿಲ್ಲ ಎನ್ನುವುದು ಸರಿಯಲ್ಲವೆಂದೂ, ಮುದ್ದೆ ಮಾಲಿಗೂ, ಆರೋಪಿಗೂ ಮತ್ತು ವಾಹನಕ್ಕೂ ಯಾವುದೇ ಸಂಬಂಧವಿಲ್ಲ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

11. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಇಲ್ಲಿ ಎದುರುದಾರರ ಪಕ್ಷದವರ ಮುಖ್ಯ ವಾದವೆಂದರೆ, ಸ್ವತಂತ್ರ ಪಂಚ ಸಾಕ್ಷಿದಾರರುಗಳನ್ನು ಬಳಸಿಲ್ಲ ಎನ್ನುವುದು. ಆದರೆ ಈ ಪ್ರಕರಣದಲ್ಲಿ ಪಂಚ ಸಾಕ್ಷಿದಾರರಿಬ್ಬರೂ ಪ್ರತಿಕೂಲ ಸಾಕ್ಷಿಯನ್ನು ನುಡಿದಿರುವುದರಿಂದ ಸ್ವತಂತ್ರ ಪಂಚರನ್ನು ಬಳಸಿಕೊಂಡಿಲ್ಲ ಎನ್ನುವ ವಾದವು ಸರಿಯಲ್ಲ. ದಿನಾಂಕ: 13.12.2002ರಂದು ಫಿರ್ಯಾದಿ ಕಡೆಯವರು ಮುರ್ಡೇಶ್ವರಕ್ಕೆ ಹೋಗಿರದಿದ್ದರೆ ಅವರು ಆ ದಿನ ಆ ಸಮಯದಲ್ಲಿ ಎಲ್ಲಿದ್ದರು ಎನ್ನುವ ಬಗ್ಗೆ ಯಾವುದೇ ದಾಖಲೆಯನ್ನು ಎದುರುದಾರರ ಪಕ್ಷದವರು ನೀಡಿಲ್ಲ. ಅಲ್ಲದೇ ಆರೋಪಿ ಹಾಗೂ ವಾಹನವನ್ನು ಇವರುಗಳು ಎಲ್ಲಿಂದ ತಂದರು ಎನ್ನುವ ಬಗ್ಗೆ ವಿವರಿಸಿಲ್ಲ. ವಾರಸುದಾರರಿಲ್ಲದ ಮುದ್ದೆ ಮಾಲನ್ನು ಜಪ್ತು ಮಾಡಿ, ಗುನ್ಹೆ ದಾಖಲಿಸಿ, ತನಿಖೆ ಮುಂದುವರೆಸಲು ಫಿರ್ಯಾದಿ ಕಡೆಯವರಿಗೆ ಅಧಿಕಾರ ಇರುವಾಗ ಅಂತಹ ಮಾಲನ್ನು ಸೇರಿಸಿ, ಬೇಕೆಂದೇ ಈ ಆರೋಪಿಯ ಮೇಲೆ ಆರೋಪ ಹೊರಿಸಲು ಫಿರ್ಯಾದಿ ಕಡೆಯವರಿಗೂ ಮತ್ತು ಆರೋಪಿಗೂ ಇರುವ ದ್ವೇಷ ಅಥವಾ ವೈಶಮ್ಯವೇನು ಎಂಬುದರ ಬಗ್ಗೆ ಸಹ ಎದುರುದಾರರ ಪಕ್ಷದವರು ವಿವರಿಸಿರುವುದಿಲ್ಲ.

12. ಈ ಪ್ರಕರಣದ ಪಂಚ ಸಾಕ್ಷಿ ನಂ.1 ನೇಯವರಾದ ರಾಜು ತಿಮ್ಮಪ್ಪ ನಾಯ್ಕ ಇವರು ದಿನಾಂಕ: 04.08.2004ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-2 ರಂತೆ ತನ್ನ ಸಾಕ್ಷ್ಯವನ್ನು ನುಡಿಯುತ್ತಾ, ಈ ಪ್ರಕರಣದಲ್ಲಿನ ಅರ್ಜಿದಾರ ಹರೀಶ ಬಂಗಾರಪ್ಪ ಸಿರ್ಸಿಕರ ಇವರು ತನಗೆ 2-3 ವರ್ಷದಿಂದ ನೋಡಿ ಪರಿಚಯವಿದೆಯೆಂದೂ, ಅಬಕಾರಿ ಇಲಾಖೆ ಅಧಿಕಾರಿಗಳು ತನ್ನ ಸಮಕ್ಷದಲ್ಲಿ ಈ ಹಿಂದೆ ಅಕ್ರಮವಾಗಿ ವಾಹನದಲ್ಲಿ ಅಬಕಾರಿ ಸರಾಯಿ ಸಾಗಾಟವನ್ನು ಮಾಡುತ್ತಿದ್ದಾಗ ಯಾವುದೇ ಪಂಚನಾಮೆ ವಗೈರೆ ಮಾಡುತ್ತಿದ್ದ ಬಗ್ಗೆ ಪಂಚನಾಮೆ ಮಾಡಿರುವುದಿಲ್ಲವೆಂದೂ, ನುಡಿದು ಈ ಸಾಕ್ಷಿದಾರನಿಗೆ ತನ್ನ ಸಹಿ ತೋರಿಸಲಾಗಿ ಅದನ್ನು ತನ್ನದೇ ಸಹಿ ಅಂತಾ ಗುರ್ತಿಸಿರುತ್ತಾರೆ. ಆದರೆ ಅದನ್ನು ಎಲ್ಲಿ ಯಾವಾಗ ಕೊಟ್ಟಿದ್ದೇನೆ ಅಂತಾ ಹೇಳಲು ಆಗುವುದಿಲ್ಲವೆಂದೂ, ತನ್ನ ಸಹಿ ಇರುವ ದಾಖಲೆಯಲ್ಲಿ ಏನು ಬರೆದಿದ್ದಾರೆ ಎನ್ನುವುದು ತನಗೆ ಗೊತ್ತಿಲ್ಲವೆಂದೂ ನುಡಿದಿರುತ್ತಾರೆ. ನಂತರ ಮಾನ್ಯ ಎಡಿಪಿಯವರ ಪಾಟಿ ಸವಾಲಿನಲ್ಲಿ ಈ ಹರೀಶ ಬಂಗಾರಪ್ಪ ಸಿರ್ಸಿಕರ ಅವರೊಂದಿಗೆ ಈ ಹಿಂದೆ ತಾನು ಮಾತನಾಡಿರಲಿಲ್ಲವೆಂದೂ, ಯಾವುದೇ ಒಬ್ಬ ವ್ಯಕ್ತಿ ಒಂದು ಊರಿನಲ್ಲಿ ತಿರುಗಾಡುತ್ತಿದ್ದರೆ ಆತನನ್ನು ಸಾಮಾನ್ಯವಾಗಿ ಮಾತನಾಡಿಸುವೆನೆಂದೂ, ಹರೀಶ ಬಂಗಾರಪ್ಪ, ಸಿರ್ಸಿಕರ ಇವರು ತಮ್ಮ ಊರಿನಲ್ಲಿ ತಿರುಗಾಡುತ್ತಿರುವಾಗ ತಾನು ಅವರನ್ನು ಮಾತನಾಡಿಸದೇ ಇರುವುದಕ್ಕೆ ಯಾವುದೇ ಬಲವಾದ ಕಾರಣಗಳು ಇರುವುದಿಲ್ಲವೆಂದೂ, ತಾನು 4ನೇ ತರಗತಿಯವರೆಗೆ ಓದಿರುತ್ತೇನೆಂದೂ, ತನಗೆ ಕನ್ನಡ ಓದಲು ಬರೆಯಲು ಬರುತ್ತದೆಂದೂ, ತನಗೆ ವ್ಯವಹಾರ ಜ್ಞಾನವಿದೆಯೆಂದೂ, ತಾನು ದಾಖಲೆಗೆ ಸಹಿ ಹಾಕುವಾಗ ಅದರಲ್ಲಿರುವ ಮಜಗರ ಅಥವಾ ಸಂಗತಿಗಳನ್ನು ತಿಳಿದುಕೊಂಡು ಸರಿಯಾಗಿದ್ದಲ್ಲಿ ಮಾತ್ರ ಸಹಿ ಮಾಡುತ್ತೇನೆಂದೂ, ನಿಶಾನೆ ಪಿ-1 ರಲ್ಲಿರುವ ತನ್ನ ಸಹಿಯನ್ನು ಪಡೆದುಕೊಳ್ಳುವ ಪೂರ್ವದಲ್ಲಿ ಅಬಕಾರಿ ಅಧಿಕಾರಿಗಳು ತನಗೆ ಒತ್ತಾಯ ಮಾಡಿರಲಿಲ್ಲವೆಂದೂ, ದಿನಾಂಕ: 13.12.2002ರಂದು ಮಧ್ಯಾಹ್ನ 1.30 ಗಂಟೆಯ ಸುಮಾರಿಗೆ ಈ ಪ್ರಕರಣದ ಅರ್ಜಿದಾರ ಹರೀಶ ಬಂಗಾರಪ್ಪ ಸಿರ್ಸಿಕರ ಈತನು ತನ್ನ ವಾಹನ ಸಂಖ್ಯೆ ಸಿಎನ್ಇ-3694 ರಲ್ಲಿ ಅಕ್ರಮವಾಗಿ ಮೋಟಾರ್ ಟ್ಯೂಬಿನಲ್ಲಿ ಸರಾಯಿ ಸಾಗಾಟ ಮಾಡುತ್ತಿದ್ದಾಗ ಅಬಕಾರಿ ಅಧಿಕಾರಿಗಳು ತನ್ನ ಸಮಕ್ಷಮದಲ್ಲಿ ಜೀಪ್‌ನ್ನು ತಪಾಸಣೆ ಮಾಡಿ ಅಬಕಾರಿ ವಸ್ತುಗಳನ್ನು ಮತ್ತು ಜೀಪ್‌ನ್ನು ಜಪ್ತಿ ಮಾಡಿ ಪಂಚನಾಮೆ ಮಾಡಿದ್ದಾರೆ ಎನ್ನುವುದು ಸರಿಯಲ್ಲವೆಂದೂ, ಈ ಪ್ರಕರಣದ ಇನ್ನೊಬ್ಬ ಪಂಚ ತನ್ನ ಪರಿಚಯದವನಿರುತ್ತಾನೆಂದೂ, ಈ ದಿವಸ ಅರ್ಜಿದಾರ ಹರೀಶ ಸಿರ್ಸಿಕರರವರು ಪ್ರಾಧಿಕಾರದ ಮುಂದೆ ಹಾಜರಾಗಲು ಬಂದಿರುತ್ತಾರೆಂದೂ, ಅರ್ಜಿದಾರ/ ಆರೋಪಿ ತನ್ನ ಗುರ್ತಿನವನಾಗಿದ್ದರಿಂದ ಆತನಿಗೆ ಸಹಾಯ ಮಾಡಲು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ. ಅರ್ಜಿದಾರರ ಪರ ವಕೀಲರ ಮರು ಸವಾಲಿನಲ್ಲಿ ಗುಣವಂತೆಯಲ್ಲಿ ರಾಷ್ಟ್ರೀಯ ಹೆದ್ದಾರಿ ಪಕ್ಕದಲ್ಲಿ ತನ್ನದೊಂದು ಗೂಡಂಗಡಿ ಇದೆಯೆಂದೂ, ಹರೀಶ ಸಿರ್ಸಿಕರ ಈತನು ತನ್ನ ಅಂಗಡಿಯ ಮುಂದಿನಿಂದ ಟೆಂಪೋವನ್ನು ಬಾಡಿಗೆಗೆ ತೆಗೆದುಕೊಂಡು ಹೋಗುವಾಗ ಮತ್ತು ಬರುವಾಗ ನೋಡಿದ ಮುಖಪರಿಚಯವಿದೆಯೆಂದೂ, ಆತನು ಯಾವತ್ತೂ ತಮ್ಮ ಅಂಗಡಿಗೆ ಬಂದದ್ದಾಗಲೀ ಮಾತಾಡಿದ್ದಾಗಲೀ ಇರುವುದಿಲ್ಲವೆಂದೂ, ಈ ಪಂಚನಾಮೆ ನಿಶಾನೆ ಪಿ-1 ರ ಬಗ್ಗೆ ಭಟ್ಕಳ ನ್ಯಾಯಾಲಯದಲ್ಲಿ ಸಾಕ್ಷಿ ನುಡಿದಿರುತ್ತೇನೆಂದೂ, ಈ ಸಹಿಯನ್ನು ಯಾರು, ಯಾವಾಗ ಯಾಕೆ ಪಡೆದುಕೊಂಡು ಹೋದರು ಅನ್ನುವುದು ತನಗೆ ಗೊತ್ತಿಲ್ಲವೆಂದೂ, ಪೊಲೀಸ್‌ರಾಗಲೀ ಅಬಕಾರಿ ಅಧಿಕಾರಿಗಳಾಗಲೀ ಅಥವಾ ಬೇರೆ ಅಧಿಕಾರಿಗಳು ಸಹಿ ಹಾಕು ಎಂದು ಹೇಳಿದಾಗ ತಾನು ನಿರೂಪಾಯನಾಗಿ ಸಹಿ ಹಾಕುತ್ತೇನೆ ಎಂದು ನುಡಿದಿರುತ್ತಾರೆ. ಈ ಪ್ರಕರಣದ ಪಂಚ ಸಾಕ್ಷಿ ನಂ.2ನೇಯವರಾದ ಕೃಷ್ಣಾ ಕೂಲ್ಲುರು ನಾಯ್ಕ ಇವರು ಸಹ ಅದೇ ದಿನ ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-3 ರಂತೆ ಇದೇ ರೀತಿಯ ಸಾಕ್ಷಿಯನ್ನು ನುಡಿದಿರುತ್ತಾರೆ.

13. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಸದರಿ ಸಾಕ್ಷಿದಾರರು ಮುಖ್ಯ ವಿಚಾರಣೆಯಲ್ಲಿ ಒಂದು ರೀತಿ, ಪಾಟಿ ಸವಾಲಿನಲ್ಲಿ ಒಂದು ರೀತಿ ಮತ್ತು ಮರು ವಿಚಾರಣೆಯಲ್ಲಿ ಇನ್ನೊಂದು ರೀತಿಯಲ್ಲಿ ಸಾಕ್ಷಿ ನುಡಿದಿರುವುದನ್ನು ಗಮನಿಸಿದಾಗ ಸದರಿಯವರುಗಳು ಅರ್ಜಿದಾರರಿಗೆ ಸಹಾಯ ಮಾಡುವ ಉದ್ದೇಶದಿಂದ ಸುಳ್ಳು ಸಾಕ್ಷಿ ನುಡಿದಿರುವುದು ಸ್ಪಷ್ಟವಾಗುತ್ತದೆ. ಅಲ್ಲದೇ ಮಾನ್ಯ ಉಚ್ಚ ನ್ಯಾಯಾಲಯದ ಸನ್ಮಾನ್ಯ ಜಸ್ಟೀಸ್ ರಾಮಣ್ಣ ಜೆ. ರವರು ತನ್ನ ಇತ್ತೀಚಿನ ತೀರ್ಪಿನಲ್ಲಿ ಪಂಚಸಾಕ್ಷಿದಾರರುಗಳು ಪ್ರಕರಣದಲ್ಲಿ ಪ್ರತಿಕೂಲ ಸಾಕ್ಷಿಯನ್ನು ನುಡಿದಲ್ಲಿ ಅದು ಅಬಕಾರಿ ಮುಟ್ಟುಗೋಲು ಪ್ರಕರಣಕ್ಕೆ ಧಕ್ಕೆಯಾಗುವುದಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಹೀಗಾಗಿ ಪ್ರಕರಣದ ಪಂಚರು ಪ್ರಾಧಿಕಾರದಲ್ಲಿ ಅಭಿಯೋಜನೆಯ

ಪಕ್ಷಕ್ಕೆ ಪೂರಕವಾಗಿ ಅಥವಾ ಪ್ರತಿಕೂಲ ಸಾಕ್ಷಿ ನುಡಿದಲ್ಲಿ ಅಥವಾ ಸಾಕ್ಷಿ ನುಡಿಯಲು ಹಾಜರಾಗದಿದ್ದಲ್ಲಿ ಅಂತಹ ಸಾಕ್ಷಿಯನ್ನು ಪರಿಗಣನೆಗೆ ತೆಗೆದುಕೊಳ್ಳದಿರುವುದು ಸೂಕ್ತವೆಂದು ನನ್ನ ಅಭಿಪ್ರಾಯವಾಗಿದೆ.

14. ಈ ಪ್ರಕರಣದ ತನಿಖಾಧಿಕಾರಿಗಳಾದ ದಾಮೋದರ ತುಕ್ಕು ನಾಯಕ, ಅಬಕಾರಿ ಉಪ ನಿರೀಕ್ಷಕರು, ಭಟ್ಕಳ ಉಪ ವಲಯ ಇವರು ದಿನಾಂಕ: 06.10.2004 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಪಿ.ಡಬ್ಲ್ಯೂ-4 ರಂತೆ ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ದಿನಾಂಕ: 06.01.2003 ರಂದು ತಾನು ಈ ಪ್ರಕರಣದ ಮುಂದಿನ ತನಿಖೆಗಾಗಿ ಕಾರವಾರದ ಗುಪ್ತ ವಾರ್ತಾ ವಿಭಾಗದ ಅಬಕಾರಿ ಉಪ ನಿರೀಕ್ಷಕರಿಂದ ಪಡೆದುಕೊಂಡೆನೆಂದೂ, ಪರಿಶೀಲಿಸಲಾಗಿ ಅದು ಕ್ರಮಬದ್ಧವಾಗಿತ್ತೆಂದೂ, ಪ್ರಕರಣದಲ್ಲಿ ಜಪ್ತು ಮಾಡಿಕೊಂಡ ಸ್ಯಾಂಪಲ್‌ಗಳೊಂದಿಗೆ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಬೆಂಗಳೂರಿಗೆ ಕಳುಹಿಸಿಕೊಟ್ಟೆನೆಂದೂ, ನಂತರ ಬೆಂಗಳೂರಿನಿಂದ ರಾಸಾಯನಿಕ ಪರೀಕ್ಷೆ ವರದಿ ಪಡೆದುಕೊಂಡು ಆರೋಪಿತನ ಮೇಲೆ ಸಾಕಷ್ಟು ಸಾಕ್ಷ್ಯಾಧಾರಗಳು ಇರುವುದರಿಂದ ನ್ಯಾಯಾಲಯಕ್ಕೆ ಆಪಾದನೆ ಪಟ್ಟಿಯಲ್ಲಿ ಸಲ್ಲಿಸಿರುತ್ತೇನೆಂದು ನುಡಿದಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರ ಪಾಟಿ ಸವಾಲಿನಲ್ಲಿ ಜಪ್ತು ಮಾಡಿದ 6 ತಿಂಗಳ ನಂತರ ರಾಸಾಯನಿಕ ಪರೀಕ್ಷೆಗಾಗಿ ಬೆಂಗಳೂರಿಗೆ ಕಳುಹಿಸಿಕೊಟ್ಟೆನೆಂದೂ, ದಾಖಲೆಯನ್ನು ನೋಡಿ ಜಪ್ತು ಮಾಡಿದ 3 ತಿಂಗಳ ನಂತರ ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಕಳುಹಿಸಿದೆನೆಂದೂ, ಗುನ್ಹಾ ಸ್ಥಳದಿಂದ ತಮ್ಮ ಕಛೇರಿಯು ಸುಮಾರು 13 ಕಿ.ಮೀ. ಅಂತರದಲ್ಲಿದೆಯೆಂದೂ, ಗುಪ್ತ ವಾರ್ತಾ ವಿಭಾಗದವರಿಗೆ ಜಿಲ್ಲೆಯಾದ್ಯಂತ ಪ್ರಕರಣದ ದಾಖಲಿಸುವ ಅಧಿಕಾರವಿದೆಯೆಂದೂ, ತಮ್ಮ ವ್ಯಾಪ್ತಿಯಲ್ಲಿ ಆಗುವ ಅಪರಾಧಗಳಿಗೆ ಸಂಬಂಧಪಟ್ಟಂತೆ ಕಾರವಾರ ಗುಪ್ತ ವಾರ್ತಾ ವಿಭಾಗದವರು ತಮ್ಮ ವ್ಯಾಪ್ತಿಯಲ್ಲಿ ಬರುವ ಅಪರಾಧಗಳು ಬರುವ ಬಗ್ಗೆ ತಮ್ಮ ಕಛೇರಿಯಲ್ಲಿ ಒಂದು ಪ್ರಕರಣ ದಾಖಲು ಮಾಡಬಹುದಾಗಿದೆಯೆಂದೂ, ಕಾರವಾರ ಗುಪ್ತ ವಾರ್ತಾ ವಿಭಾಗದವರು ದಾಖಲಿಸಿದ ಪ್ರಕರಣವೆಂದು ತಾನು ಆರೋಪಿತನ ಮೇಲೆ ಕ್ರಮಬದ್ಧವಾಗಿ ತನಿಖೆ ನಡೆಸದೇ ಸುಳ್ಳು ಆಪಾದನೆ ಪಟ್ಟಿ ಸಲ್ಲಿಸಿದ್ದೇನೆ ಎನ್ನುವುದು ಸರಿಯಲ್ಲವೆಂದೂ, ಭಟ್ಕಳದ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿತನ ಮೇಲಿರುವ ಮೊಕದ್ದಮೆಯು ನಿರ್ದೋಷಿಯಾಗಿ ಆರೋಪಿತ ಬಿಡುಗಡೆಯಾಗಿದ್ದಾನೆ ಎನ್ನುವುದು ತನಗೆ ಗೊತ್ತಿಲ್ಲವೆಂದೂ, ನ್ಯಾಯಾಲಯದಲ್ಲಿ ಸಲ್ಲಿಸಿರುವ ಮೊಕದ್ದಮೆಯ ಬಗ್ಗೆ ಅವುಗಳ ಮುಂದಿನ ಬೆಳವಣಿಗೆಗಳ ಬಗ್ಗೆ ಪ್ರತಿ ದಿವಸ ತಿಳಿದುಕೊಳ್ಳಬೇಕಾಗುತ್ತದೆ ಎನ್ನುವುದು ಸರಿಯೆಂದೂ, ಆರೋಪಿ ಮೊಕದ್ದಮೆಯಿಂದ ಖುಲಾಸೆಯಾಗಿದ್ದಾನೆಂದು ತಿಳಿದಿದ್ದರೂ ಸಹ ಸುಳ್ಳು ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

15. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಈ ಬಗ್ಗೆ ನಮ್ಮ ಗೌರವಾನ್ವಿತ ಉಚ್ಛನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್.ವಿಜಯ ವಿರುದ್ಧ ಡೆಪ್ಯುಟಿ ಕನ್ಸ್‌ರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್‌ಆರ್-2002, ಕೆ.ಎ.ಆರ್1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ. ಈ ಆದೇಶವನ್ನು ಈ ಪ್ರಕರಣದಲ್ಲಿ ಆಧಾರವಾಗಿಟ್ಟುಕೊಳ್ಳಲಾಗಿದೆ.

Rejecting the Contention of the owner of the seized vehicle that non-filing of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation.

ಈ ಪ್ರಕರಣದ ಪಂಚರು ಖಾಯಂ ಪಂಚರು ಎನ್ನುವ ಬಗ್ಗೆ ಯಾವುದೇ ರೀತಿಯ ದಾಖಲೆಗಳಿಲ್ಲ. ಪ್ರಕರಣ ದಾಖಲಾಗಿ ಮೂರುವರೆ ವರ್ಷಗಳ ನಂತರ ಸದರಿ ಸಾಕ್ಷಿದಾರರು ಸಾಕ್ಷಿ ನುಡಿದಿರುವ ಕಾರಣ ಎಷ್ಟು ಸೀಲ್‌ಗಳನ್ನು ಹಾಕಿದ್ದಾರೆಂಬುದನ್ನು ಸಹಜವಾಗಿ ಮರೆತಿರಬಹುದು. ವಾಹನದ ಮೇಲೆ ಸೀಲ್ ಹಾಕಿರುವ ಬಗ್ಗೆ ಪಂಚನಾಮೆಯಲ್ಲಿ ನಮೂದಾಗಿಲ್ಲ. ಟೌನ್ ಪೆಟ್ರೋಲಿಂಗ್ ಕರ್ತವ್ಯಕ್ಕೆ ಹೋಗಿಲ್ಲವೆನ್ನುವ ಬಗ್ಗೆ ಯಾವುದೇ ದಾಖಲೆಗಳಿಲ್ಲ. ಸಿಬ್ಬಂದಿಗಳೊಂದಿಗೆ ನಿರ್ವಹಿಸಲಾದ ಪೆಟ್ರೋಲಿಂಗ್ ಕರ್ತವ್ಯವನ್ನು ಅಲ್ಲಗಳೆಯಲು ಬರಲಾರದು. ವಾರಸುದಾರರಿಲ್ಲದ ಪ್ರಕರಣಗಳು ದಾಖಲಾದಾಗ ಅಂತಹ ಗುನ್ಹೆಗಳ ಬಗ್ಗೆ ಪ್ರಕರಣ ದಾಖಲಿಸಲಾಗುತ್ತಿರುವಾಗ ಇದೇ ಆರೋಪಿಯ ವಿರುದ್ಧ ಈ ಪ್ರಕರಣ ದಾಖಲಿಸಲು ಫಿರ್ಯಾದಿ ಕಡೆಯವರಿಗೂ ಮತ್ತು ಆರೋಪಿಗೂ ಇರುವ ಹಗೆತನವೇನೆಂಬುದನ್ನು ಎದುರುದಾರರ ಪಕ್ಷದವರು ವಿವರಿಸಿಲ್ಲ. ಪಂಚರ ಸಮಕ್ಷಮದಲ್ಲಿ ತೆಗೆಯಲಾದ ಮಾದರಿಯಲ್ಲಿ ರಾಸಾಯನಿಕ ವರದಿಯನ್ವಯ ಮದ್ಯಸಾರದ ಅಂಶವು ಪತ್ತೆಯಾಗಿರುವುದರಿಂದ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದಲ್ಲಿ ಮದ್ಯವು ಸಾಗಿಸಲಾಗುತ್ತಿತ್ತೆನ್ನುವುದು ಸುಳ್ಳೆನ್ನುವುದು ಸರಿಯಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಅಭಿಯೋಜನೆ ಪಕ್ಷದವರು ಈ ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದು ಸ್ಪಷ್ಟವಾಗಿರುತ್ತದೆ.

16. ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕರಾದ ಹರೀಶ್ ಬಂಗಾರಪ್ಪ ಸಿರ್ಸಿಕರ ಇವರು ದಿನಾಂಕ: 25.05.2005ರಂತೆ ಈ ಪ್ರಾಧಿಕಾರದಲ್ಲಿ ಡಿ.ಡಬ್ಲ್ಯೂ-1 ರಂತೆ ಸಾಕ್ಷಿ ನುಡಿಯುತ್ತಾ, ತನ್ನ ಪರ ವಕೀಲರ ಮುಖ್ಯ ವಿಚಾರಣೆಯಲ್ಲಿ ದಿನಾಂಕ: 13.12.2002ರಂದು ಮುರ್ಡೇಶ್ವರ ರಾಷ್ಟ್ರೀಯ ಹೆದ್ದಾರಿ ಮೇಲೆ ತನಗೆ ಸೇರಿದ ಮಹೇಂದ್ರ ವಾಹನದಲ್ಲಿ ಎರಡು ಟ್ಯೂಬು ಸರಾಯಿಯನ್ನು ಒಯ್ಯುತ್ತಿದ್ದೇನೆ ಎಂದು ಸುಳ್ಳು ಕೇಸು ಹಾಕಿದ್ದು ಇರುತ್ತದೆಂದೂ, ಈ ಪ್ರಕರಣದಲ್ಲಿ ಪೊಲೀಸರು ಜಪ್ತಿ ಮಾಡಿರುವ ಸರಾಯಿಗೂ ತನ್ನ ವಾಹನಕ್ಕೂ ಮತ್ತು ತನಗೂ ಯಾವುದೇ ರೀತಿಯ ಸಂಬಂಧ ಇರುವುದಿಲ್ಲವೆಂದೂ, ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಜೆ.ಎಂ.ಎಫ್.ಸಿ. ನ್ಯಾಯಾಲಯ ಭಟ್ಕಳ ರವರ ಸಿ.ಸಿ. ನಂ.2499/2003ರಲ್ಲಿ ಪ್ರಕರಣ ನಡೆದಿದೆಯೆಂದೂ, ಭಟ್ಕಳ ಕೋರ್ಟ್‌ನಲ್ಲಿ ಈ ಪ್ರಕರಣದಲ್ಲಿ ತಾನು ನಿರ್ದೋಷಿ ಎಂದು ತೀರ್ಪಾಗಿದೆಯೆಂದೂ, ತೀರ್ಪಿನ ಪ್ರತಿಯನ್ನು ಈಗಾಗಲೇ ಹಾಜರುಪಡಿಸಿರುತ್ತೇನೆಂದೂ, ಆದುದರಿಂದ ತನ್ನ ಮೇಲೆ ದಾಖಲಾಗಿರುವ ಈ ಪ್ರಕರಣವನ್ನು ಕೈಬಿಡಬೇಕಾಗಿ ವಿನಂತಿಸುತ್ತೇನೆ ಎಂದು ನುಡಿದಿರುತ್ತಾರೆ. ನಂತರ ಮಾನ್ಯ ಎ.ಡಿ.ಪಿ.ಯವರ ಪಾಟಿ ಸವಾಲಿನಲ್ಲಿ ಅಬಕಾರಿ ಇಲಾಖೆಯವರಿಗೆ ತನ್ನ ಮೇಲೆ ದ್ವೇಷ ಅಥವಾ ಹಟ ಇರುವುದಿಲ್ಲವೆಂದೂ, ಈ ಕೇಸಿನ ಫಿರ್ಯಾದುದಾರ ಎಸ್.ಎಸ್.ಸಾರಂಗ, ಅ.ಉ.ನಿ., ಗುಪ್ತ ವಾರ್ತಾ ವಿಭಾಗ, ಕಾರವಾರ ಇವರಿಗೆ ತನ್ನ ಮೇಲೆ ಸುಳ್ಳು ಪ್ರಕರಣ ದಾಖಲು ಮಾಡುವ ಬಗ್ಗೆ ವೈರತ್ವ ಇರುವುದಿಲ್ಲವೆಂದೂ, ಮಹೇಂದ್ರ ಜೀಪ್ ಸಂಖ್ಯೆ: ಸಿಎನ್‌ಇ-3694 ರಲ್ಲಿ ಅಕ್ರಮವಾಗಿ ಸರಾಯಿ ಸಾಗಾಟ ಮಾಡುತ್ತಿದ್ದುದಕ್ಕಾಗಿ ಪ್ರಕರಣವನ್ನು ದಾಖಲಿಸಲಾಗಿರುತ್ತದೆಯೆಂದೂ, ಈ ಪ್ರಕರಣಕ್ಕೆ ಸಂಬಂಧಪಟ್ಟ ಸಿ.ಸಿ. ನಂ.2499/2003 ರಲ್ಲಿ ಭಟ್ಕಳ ನ್ಯಾಯಾಲಯದ ಪ್ರಕರಣದಲ್ಲಿ ತಾನೇ ಆರೋಪಿ ಇರುತ್ತೇನೆಂದೂ, ವಾಹನವನ್ನು ಶಾಶ್ವತವಾಗಿ ಬಿಡುಗಡೆ ಮಾಡಿಸಿಕೊಂಡು ಹೋಗುವುದಕ್ಕಾಗಿ ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

17. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಈ ಪ್ರಕರಣದ ಆರೋಪಿಯೇ ವಾಹನದ ಮಾಲೀಕರನಾಗಿರುತ್ತಾನೆ. ಹೀಗಾಗಿ ಆತನ ಗಮನಕ್ಕೆ ಬಾರದೇ ಮತ್ತು ಆತನು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯದ ಸಾಗಾಣಿಕೆಯಾಗಿದೆ ಎಂಬುದನ್ನು ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಲು ವಿಫಲರಾಗಿರುವುದು ಕಂಡುಬರುತ್ತದೆ. ಈ ಬಗ್ಗೆ ಗೌರವಾನ್ವಿತ ಉಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಜನ್ ಪಿಟೀಷನ್

ನಂ.338 ಆಫ್ 2000, ದಿನಾಂಕ: 01.10.2002 (ಅಬಕಾರಿ ನಿರೀಕ್ಷಕರು, ಬೆಂಗಳುರು ಗ್ರಾಮಾಂತರ ಜಿಲ್ಲೆ ಹಾಗೂ ಇತರರು ವಿರುದ್ದ ಪಿ. ವೆಂಕಟರಮಣ) ರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

"A close reading of conditions would imply that the person incharge of the vehicle if he were to misuse the vehicle for illegal transporting directely by himself or allowing others conciously, the owner becomes vicariously lible for the acts and he has to suffer the grave consequences of confiscation. The said excuse is not a ground to exonerate from the consequence of confiscation under section 43A (2) of the Act Confiscation."

ಮೇಲಿನ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನ ಯಾರ ವಶದಲ್ಲಿತ್ತೋ ಅವರ ಗಮನಕ್ಕೆ ಬಾರದೇ ಮತ್ತು ಅವರು ಶಾಮೀಲಾಗದೇ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬುದನ್ನು ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಲು ವಿಫಲರಾಗಿರುವುದು ಕಂಡುಬರುತ್ತದೆ.

18. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಮದ್ಯ ಮತ್ತು ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 181/2001 ದಿನಾಂಕ: 05.10.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 02/ 2002 ದಿನಾಂಕ: 14.02.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 107/ 2003, ದಿನಾಂಕ: 13.04.2005 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಾರವಾರ ಗುಪ್ತ ವಾರ್ತಾ ವಿಭಾಗದ ಅಬಕಾರಿ ಉಪ ನಿರೀಕ್ಷಕರ ಗುನ್ಹೆ ಸಂಖ್ಯೆ: 04/2002-03, ದಿನಾಂಕ:13.12.2002ರಲ್ಲಿ ಜಪ್ತಿಯಾದಂತಹ ಒಂದು ಮಹೀಂದ್ರಾ ಜೀಪ್ ಸಂಖ್ಯೆ: ಸಿಎನ್‌ಇ-3694 ನೇದನ್ನು ಹಾಗೂ ಪ್ರತಿಯೊಂದರಲ್ಲಿ ತಲಾ 30 ಲೀಟರ್‌ನಂತಿರುವ ಕಳ್ಳಭಟ್ಟಿ ಸರಾಯಿಯ ಎರಡು ಟ್ಯೂಬ್‌ಗಳು ಹಾಗೂ 40 ಲೀಟರ್ ಕಳ್ಳಭಟ್ಟಿ ಸರಾಯಿ ಇರುವ ಒಂದು ಟ್ಯೂಬನ್ನು (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಸೀಸೆಗಳನ್ನು ಹೊರತುಪಡಿಸಿ) ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ. ಮುಟ್ಟುಗೋಲು ಹಾಕಿಕೊಂಡ ಕಳ್ಳಭಟ್ಟಿ ಸರಾಯಿಯನ್ನು ಟ್ಯೂಬಿನ ಸಮೇತ ಅಬಕಾರಿ ಉಪ ಅಧೀಕ್ಷಕರು, ಉಪ ವಿಭಾಗ, ಹೊನ್ನಾವರ ರವರ ಸಮಕ್ಷಮ ಪಂಚನಾಮೆಯ ಮೂಲಕ ನಾಶಪಡಿಸಲು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ತಾಲ್ಲೂಕು ಕಛೇರಿ ಭಟ್ಕಳ ಇವರಿಗೆ ಕಲಂ 43ಎ(3)ರಂತೆ ಆದೇಶಿಸಿದೆ.

ಈ ಆದೇಶವು ಅರ್ಜಿದಾರರಿಗೆ ತಲುಪಿದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಮೇ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಎ.ಎಸ್. ವಿಶ್ವರೂಪ**
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ.1: ಸುರೇಶ ಎಸ್. ಸಾರಂಗ, ಅ.ಉ.ನಿ.
ಪ್ರಾ.ಸಾ.ನಂ.2: ರಾಜು ತಿಮ್ಮಪ್ಪ ನಾಯ್ಕ.
ಪ್ರಾ.ಸಾ.ನಂ.3: ಕೃಷ್ಣಾ ಕುಲ್ಲೂರ ನಾಯ್ಕ.
ಪ್ರಾ.ಸಾ.ನಂ.4: ಡಿ.ಟಿ. ನಾಯ್ಕ, ಅ.ಉ.ನಿ.

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯೂ.1: ಹರೀಶ ಬಂಗಾರಪ್ಪ ಸಿರ್ಸಿಕರ.

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ1 : ಪಂಚನಾಮೆ.
ನಿಶಾನೆ ಪಿ1ಎ : ಪಂಚನಾಮೆಯ ಮೇಲಿನ ಪಿ.ಡಬ್ಲ್ಯೂ-1ನೇಯವರ ಸಹಿ.
ನಿಶಾನೆ ಪಿ1ಬಿ : ಪಂಚನಾಮೆಯ ಮೇಲಿನ ಪಿ.ಡಬ್ಲ್ಯೂ-2ನೇಯವರ ಸಹಿ.
ನಿಶಾನೆ ಪಿ1ಸಿ : ಪಂಚನಾಮೆಯ ಮೇಲಿನ ಪಿ.ಡಬ್ಲ್ಯೂ-3ನೇಯವರ ಸಹಿ.
ನಿಶಾನೆ ಪಿ2: ಪ್ರ.ಮಾ. ವರದಿ.
ನಿಶಾನೆ ಪಿ2ಎ: ಪ್ರ.ಮಾ. ವರದಿಯ ಮೇಲಿನ ಪಿ.ಡಬ್ಲ್ಯೂ-1ನೇಯವರ ಸಹಿ.
ನಿಶಾನೆ ಪಿ3 : ರಾಸಾಯನಿಕ ವಿಶ್ಲೇಷಣಾ ವರದಿ.
ನಿಶಾನೆ ಪಿ3ಎ : ರಾಸಾಯನಿಕ ವಿಶ್ಲೇಷಣಾ ವರದಿ ಪಿ.ಡಬ್ಲ್ಯೂ-4ನೇಯವರ ಸಹಿ.

ಅನುಬಂಧ-4

(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)

-ಇಲ್ಲಾ-

ಎ.ಎಸ್. ವಿಶ್ವರೂಪ

ಪಿ.ಆರ್.1546 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,

ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅಧೀಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**

**ನಂ. ಅಬಕಾರಿ/ ಸಿಆರ್ಎಂ/ ಡಿಟಿಸಿಆರ್/ 191/ 2001-02, ದಿನಾಂಕ:31ನೇ ಮೇ, 2005**

**ಉಪಸ್ಥಿತರು:** ಶ್ರೀ ಎ.ಎಸ್.ವಿಶ್ವರೂಪ, ಕೆ.ಇ.ಎಸ್.
ಅಧೀಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು :** ಐ.ಎಲ್. ಶೇಖ್‌ಜಿ.
ಅಬಕಾರಿ ಉಪ ನಿರೀಕ್ಷಕರು, ತನಿಖಾ ಠಾಣೆ ಅನಮೋಡ,
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ)
**ವಿರುದ್ಧ**

**ಅರ್ಜಿದಾರರು :** ಕೆ.ಎಂ. ನಾಗರಾಜ ಬಿನ್ ಕೆ.ಎಂ. ಕೊಟ್ರಯ್ಯ,
ಇವರ ಜಿ.ಪಿ.ಎ.: ಉಮೇಶ್ ತಂದೆ ಲಿಂಗಪ್ಪ, ನಂ.62-ಹೆಚ್, 40ನೇ ಕ್ರಾಸ್, 6ನೇ ಮೈನ್, 5ನೇ ಬ್ಲಾಕ್ ಜಯನಗರ, ಬೆಂಗಳೂರು-41.

**ತೀರ್ಪು**

1. ಈ ಪ್ರಕರಣದ ಫಿರ್ಯಾದುದಾರರು ದಿನಾಂಕ: 28.03.2004ರಂದು ಮುಂಜಾನೆ 5.30ರ ಸಮಯಕ್ಕೆ ಜೋಯಿಡಾ ತಾಲ್ಲೂಕಿನ ಅನಮೋಡ ಗ್ರಾಮದಲ್ಲಿರುವ ಅಬಕಾರಿ ತನಿಖಾ ಠಾಣೆಯಲ್ಲಿ ತನ್ನ ಸಿಬ್ಬಂದಿಗಳೊಂದಿಗೆ ವಾಹನ ತಪಾಸಣಾ ಕಾರ್ಯದಲ್ಲಿ ನಿರತರಾಗಿದ್ದಾಗ ಕೇಸರಿ ಬಣ್ಣದ ನಂದಿನಿ ಹಾಲಿನ ಒಂದು ಟ್ಯಾಂಕರ್ ನಂ.ಕೆಎ-40/1777 ನೇಯದು ಬಂದಾಗ ತಮ್ಮನ್ನು ನೋಡಿ ವಾಹನದ ಚಾಲಕನು ಓಡಿಹೋಗಿ ತಪ್ಪಿಸಿಕೊಂಡನೆಂದೂ, ನಂತರ ಇನ್ನೊಬ್ಬ ಆಸಾಮಿಯು ಕೆಳಗೆ ಇಳಿಯುತ್ತಿದ್ದಂತೆ ಆತನನ್ನು ಹಿಡಿಯಲಾಯಿತೆಂದೂ, ಅದನ್ನು ಪಂಚರ ಸಮಕ್ಷಮ ತಪಾಸಣೆ ಮಾಡಿದಾಗ ಸದರಿ ಟ್ಯಾಂಕರಿನ ಮೇಲಿನಿಂದ ಹಾಲನ್ನು ತುಂಬುವ ಸಲುವಾಗಿ ಒಂದು ಚಿಕ್ಕ ಮುಚ್ಚಳವಿದ್ದು, ಇದರ ಮುಖಾಂತರ ಹಾಲನ್ನು ತುಂಬಿ ಅದರ ಹಿಂಬದಿಯಲ್ಲಿರುವ ಇನ್ನೊಂದು ವಾಲ್‌ನ ಮುಖಾಂತರ ಹಾಲನ್ನು ತೆಗೆಯುವ ವ್ಯವಸ್ಥೆ ಇದ್ದು ನಂತರ ಮೇಲಿನ ಮುಚ್ಚಳ ತೆಗೆದು ಬ್ಯಾಟರಿ ಬೆಳಕಿನಿಂದ ಒಳಗಡೆ ನೋಡಲಾಗಿ ಅದರಲ್ಲಿ 301 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿಯೂ ತಲಾ 180 ಮಿ.ಲೀ.ನ 48 ಸೀಸೆಗಳಂತೆ ಒಟ್ಟು 14,448 ಓರಿಜಿನಲ್ ಚಾಯ್ಸ್ ವಿಸ್ಕಿ ಎಂಬ ಮದ್ಯದ ಸೀಸೆಗಳು ಇದ್ದದ್ದು ಕಂಡುಬಂದಿದ್ದರಿಂದ ಮತ್ತು ಇವುಗಳನ್ನು ಸಾಗಿಸಲು ಯಾವುದೇ ರೀತಿಯ ದಾಖಲೆಗಳು ವಾಹನದಲ್ಲಿ ಇದ್ದದ್ದು ಕಂಡುಬರದೇ ಇದ್ದುದರಿಂದ ಇದನ್ನು ಅಕ್ರಮ ಮದ್ಯ ಸಾಗಾಣಿಕೆಯ ಪ್ರಕರಣವೆಂದು ಪರಿಗಣಿಸಿ, ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 12 ಮತ್ತು 14ರ ಪ್ರಕಾರ ಅಪರಾಧವಾಗಿರುವುದಾಗಿ ಹಾಗೂ ಕಲಂ 32, 34 ಮತ್ತು 35ಎ ಪ್ರಕಾರ ಶಿಕ್ಷಾರ್ಹವಾಗಿರುವುದಾಗಿ ತನ್ನ ಫಿರ್ಯಾದನ್ನು ನೀಡಿದ ಪ್ರಕಾರ ಜೋಯಿಡಾ ಉಪ ವಲಯದ ಅಬಕಾರಿ ಉಪ ನಿರೀಕ್ಷಕರ ಗುನ್ನೆ ಸಂಖ್ಯೆ: 5/ 2003-04, ದಿನಾಂಕ:28.03.2004ರಂತೆ ಗುನ್ನೆಯನ್ನು ದಾಖಲಿಸಿ, ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಕ್ಕಾಗಿ ಗುನ್ನೆಗೆ ಸಂಬಂಧಿಸಿದ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

2. ದಿನಾಂಕ:19.04.2004ರಂದು ಕೆ.ಎಂ. ನಾಗರಾಜ ತಂದೆ ಕೆ.ಎಂ. ಕೊಟ್ರಯ್ಯ ವಾಸ: ಜಯನಗರ ಬೆಂಗಳೂರು ಇವರ ಪರವಾಗಿ ಜಿ.ಪಿ.ಎ. ಧಾರಕರಾದ ಉಮೇಶ ತಂದೆ ಲಿಂಗಪ್ಪ, ನಂ.62-ಹೆಚ್, 40ನೇ ಕ್ರಾಸ್, 6ನೇ ಮುಖ್ಯ ರಸ್ತೆ, 5ನೇ ಬ್ಲಾಕ್, ಜಯನಗರ, ಬೆಂಗಳೂರು ಇವರು ತಮ್ಮ ವಕೀಲರ ಮೂಲಕ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸುತ್ತಾ, ಈ ಪ್ರಕರಣದಲ್ಲಿ ವಾಹನದ ಮಾಲೀಕರು ಭಾಗಿಯಾಗಿಲ್ಲವೆಂದು ತಿಳಿಸುತ್ತಾ, ಪ್ರಕರಣದಲ್ಲಿ ಹೊರಿಸಲಾದ ಆರೋಪಗಳನ್ನು ಅಲ್ಲಗಳೆದು ಜಪ್ತಿಯಾದಂತಹ ವಾಹನವನ್ನು ನಷ್ಟಭರ್ತಿ ಪತ್ರ ಮತ್ತು ಜಾಮೀನನ್ನು ಪಡೆದು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ.

3. ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು, ಸೂಪಾ ಉಪವಲಯ ರವರ ಪತ್ರ ಸಂಖ್ಯೆ: ಇಎಕ್ಸ್‌ಇ/ ಸಿಆರ್ಎಂ/ 05/ 2003-04, ದಿನಾಂಕ:26.04.2004ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಈಥೈಲ್ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿನ ಮದ್ಯಸಾರದ ಅಂಶವು 26.7 ಯು.ಪಿ. ಕಂಡುಬಂದಿರುವುದಾಗಿ ಮತ್ತು ಇದು ಮಾನವನ ಸೇವನೆಗೆ ಯೋಗ್ಯವಿರುವುದಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

4. ಈ ಪ್ರಕರಣದಲ್ಲಿ ಜಪ್ತಿಯಾದ ಮದ್ಯದ ಬಗ್ಗೆ ಯಾರೂ ತನ್ನ ಹಕ್ಕನ್ನು ಸ್ಥಾಪಿಸಿ ಅರ್ಜಿಯನ್ನು ಸಲ್ಲಿಸದಿದ್ದ ಕಾರಣ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ ಸಿಆರ್ಎಂ/ ಡಿಟಿಸಿಆರ್/ 191/ 2003-04, ದಿನಾಂಕ: 06.05.2004 ರಂತೆ ಜಪ್ತಿಯಾದ ಮದ್ಯದ ಪೆಟ್ಟಿಗೆಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ, ಅವುಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡಲು ಆದೇಶಿಸಿರುತ್ತಾರೆ.

5. ಪ್ರಾಧಿಕೃತ ಅಧಿಕಾರಿಗಳು ಹಾಗೂ ಹೆಚ್ಚುವರಿ ಅಬಕಾರಿ ಅಧೀಕ್ಷಕರು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಇಎಕ್ಸ್‌ಇ/ 427/ ಪಿಟಿಷನ್/ 2002-03, ದಿನಾಂಕ: 11.06.2004ರಂತೆ ಈ ಪ್ರಕರಣದಲ್ಲಿ ಜಪ್ತಿಯಾಗಿರುವ ವಾಹನ ಸಂಖ್ಯೆ: ಕೆಎ-40/1777 ನೇಯದು ಇದಕ್ಕಿಂತ ಮೊದಲು ದಿನಾಂಕ: 29.12.2003ರಂದು ಯಲಹಂಕ-ಚಿಕ್ಕಬಳ್ಳಾಪುರ ರಸ್ತೆಯಲ್ಲಿ ಅಕ್ರಮವಾಗಿ 283 ಪೆಟ್ಟಿಗೆ ಮದ್ಯವನ್ನು ಸಾಗಾಣಿಕೆ ಮಾಡುತ್ತಿದ್ದ ಸಂದರ್ಭದಲ್ಲಿ ರಾಜ್ಯ ವಿಚಕ್ಷಕ ದಳದ ಅಬಕಾರಿ ನಿರೀಕ್ಷಕರಿಂದ ಪ್ರ.ಮಾ.ವ. ಸಂಖ್ಯೆ: 16/2003-04ರಲ್ಲಿ ಜಪ್ತಿಯಾಗಿದ್ದು, ಶ್ರೀ ಕೆ.ಎಂ. ನಾಗರಾಜ ಬಿನ್ ಕೆ.ಎಂ. ಕೊಟ್ರಯ್ಯ ಎಂಬುವವರು ಪ್ರಾಧಿಕಾರದ ಮುಂದೆ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ ಅಕ್ರಮ ಮದ್ಯ ಸಾಗಾಣಿಕೆಗೂ ತನಗೂ ಯಾವುದೇ ಸಂಬಂಧವಿರುವುದಿಲ್ಲವೆಂದೂ, ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡುವಂತೆ ಕೋರಿದ್ದು, ಅರ್ಜಿದಾರರ ಕೋರಿಕೆಯನ್ನು ಪರಿಗಣಿಸಿ

ರೂ.1,25,000/- ಗಳ ಮೊತ್ತಕ್ಕೆ ಬ್ಯಾಂಕ್ ಗ್ಯಾರಂಟಿ ಮತ್ತು ಅದೇ ಮೊತ್ತದ ಇಂಡಮ್ನಿಟಿ ಬಾಂಡ್ ಪಡೆದು ಕೆಲವು ಷರತ್ತಿಗೊಳಪಟ್ಟು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಿರುವುದಾಗಿ ತಿಳಿಸಿ, ಮಧ್ಯಂತರ ಆದೇಶದ ಪ್ರತಿಯನ್ನು ಲಗತ್ತಿಸಿರುತ್ತಾರೆ. ಸದರಿ ಆದೇಶದಲ್ಲಿ ವಿಧಿಸಲಾದ ಷರತ್ತುಗಳ ಪೈಕಿ ವಾಹನವನ್ನು ಇಂತಹ ಕೃತ್ಯದಲ್ಲಿ ತೊಡಗಿಸಬಾರದು ಎಂಬುದು ಸಹ ಒಂದಾಗಿದ್ದು, ಸದರಿ ಅರ್ಜಿದಾರರು ಷರತ್ತನ್ನು ಉಲ್ಲಂಘಿಸಿದ್ದು ಸ್ಪಷ್ಟವಾಗಿ ಕಂಡುಬಂದಿರುವುದರಿಂದ ಮತ್ತು ಇದೊಂದು ಮೇಲ್ನೋಟಕ್ಕೆ ಸಾಬೀತಾಗುವಂತಹ ಅಪರಾಧವಾಗಿರುವುದು ಕಂಡುಬಂದಿದ್ದರಿಂದ ಈ ವಾಹನವನ್ನು ಪುನಃ ಇಂತಹ ಕೃತ್ಯದಲ್ಲಿ ಬಳಸಬಹುದೆಂಬ ಕಾರಣದಿಂದ ಸದರಿ ವಾಹವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ಅರ್ಜಿದಾರರು ಸಲ್ಲಿಸಿದ್ದ ಅರ್ಜಿಯನ್ನು ಪರಿಗಣನೆಗೆ ತೆಗೆದುಕೊಂಡಿರಲಿಲ್ಲ.

6. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ(1) ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಳ್ಳಲಾಗಿ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿ.ಡಬ್ಲ್ಯು 1 ರಿಂದ 3ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ.1 ರಿಂದ 4 ರವರೆಗಿನ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ.

7. ಪಿ.ಡಬ್ಲ್ಯೂ-1 ರಿಂದ 3ನೇಯವರ ಹೇಳಿಕೆಗಳು ಹಾಗೂ ಅಭಿಯೋಜನೆಪರ ಸಲ್ಲಿಸಲಾಗಿದ್ದ ಲಿಖಿತ ದಾಖಲೆಗಳ ಆಧಾರದ ಮೇಲೆ ಎದುರುದಾರರ ವಿರುದ್ಧ ಸಾಕಷ್ಟು ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಪಡೆಯಲು ಬಯಸಿದಾಗ ಪ್ರತಿ ಬಾರಿಯ ವಿಚಾರಣೆಯ ಸಮಯದಲ್ಲಿಯೂ ಅರ್ಜಿದಾರರ ಪರ ಸ್ಥಳೀಯ ವಕೀಲರಾದ ಶ್ರೀ ಎಸ್.ಎಂ. ದುರ್ಗೇಕರ ಇವರಿಗೆ ಸಾಕಷ್ಟು ಬಾರಿ ಈ ಪ್ರಾಧಿಕಾರದ ಮುದ್ದಾಂ ಪುಸ್ತಕದ ಮೂಲಕ ನೋಟೀಸುಗಳನ್ನು ಕಳುಹಿಸಲಾಗಿ ಅವುಗಳನ್ನು ಸ್ವೀಕರಿಸಿಯೂ ಸಹ ದಿನಾಂಕ: 28.07.2004ನ್ನು ಹೊರತು ಪಡಿಸಿ, ಒಮ್ಮೆಯೂ ಈ ಪ್ರಾಧಿಕಾರದಲ್ಲಿ ಅಭಿಯೋಜನೆ ಪಕ್ಷದವರ ಸಾಕ್ಷಿಗಳಿಗೆ ಪಾಟಿ ಸವಾಲು ಮಾಡುವುದಕ್ಕಾಗಿ ಹಾಜರಾಗಿರುವುದಿಲ್ಲ. ಅನಂತರ ದಿನಾಂಕ: 29.07.2004ರಂದು ಸದರಿ ವಕೀಲರು ಅರ್ಜಿದಾರರಿಂದ ತನಗೆ ಯಾವುದೇ ಮುಂದಿನ ನಿರ್ದೇಶನ ಬಂದಿಲ್ಲವೆಂದೂ, ತಾನು ಈ ಪ್ರಕರಣದಲ್ಲಿ ನಿವೃತ್ತನಾಗುವ ಬಗ್ಗೆ ಅರ್ಜಿದಾರರಿಗೆ ಮತ್ತು ಅವರ ಪರ ಜಿ.ಪಿ.ಎ. ಧಾರಕರಿಗೆ ಕಳುಹಿಸಿದ ನೋಟೀಸು ಜಾರಿಯಾಗದೇ ಮರಳಿ ಬಂದಿರುವ ಬಗ್ಗೆ ಎರಡು ಅಂಚೆ ಲಕೋಟೆಗಳನ್ನು ಲಗತ್ತಿಸುತ್ತಾ, ತಾನು ಈ ಪ್ರಕರಣದಲ್ಲಿ ನಿವೃತ್ತನಾಗುವುದಾಗಿ ತಿಳಿಸಿ, ಅರ್ಜಿ ಸಲ್ಲಿಸಿರುತ್ತಾರೆ. ಸದರಿ ನಿವೃತ್ತಿ ಅರ್ಜಿಯನ್ನು ಇನ್ನುಳಿದ ಇಬ್ಬರು ವಕೀಲರುಗಳ ವಿಳಾಸವನ್ನು ಹಾಜರುಪಡಿಸುವ ಷರತ್ತಿನ ಮೇಲೆ ಅಂಗೀಕರಿಸಲಾಗಿತ್ತು. ಅನಂತರ ಸದರಿ ವಕೀಲರು ಇನ್ನೊಮ್ಮೆ ಈ ಅರ್ಜಿದಾರರು ಹಾಗೂ ಇನ್ನೊಬ್ಬ ವಕೀಲರಾದ ಶ್ರೀ ಅರ್.ಬಿ. ಕಾಂಟ್ರೆಕ್ಟರ್, ವಕೀಲರು ದೇಶಪಾಂಡೆ ನಗರ, ಹುಬ್ಬಳ್ಳಿ ಇವರಿಗೆ ಅಂಡರ್ ಸರ್ಟಿಫಿಕೇಟ್ ಪೋಸ್ಟಿಂಗ್ ಮೂಲಕ ಪತ್ರವನ್ನು ಕಳುಹಿಸಲಾಗಿ ಈ ಪತ್ರವನ್ನು ಶ್ರೀ ಆರ್.ಬಿ. ಕಾಂಟ್ರಕ್ಟರ್ ವಕೀಲರು, ಮಾತ್ರ ಸ್ವೀಕರಿಸಿದ್ದು, ಅರ್ಜಿದಾರರು ಹಾಗೂ ಅವರ ಪರ ಜಿ.ಪಿ.ಎ. ಧಾರಕರು ಸ್ವೀಕರಿಸದೇ ಅಂಚೆ ಲಕೋಟೆಯನ್ನು ಮರಳಿ ಕಳುಹಿಸಿರುತ್ತಾರೆ. ಈ ಬಗ್ಗೆ ದಿನಾಂಕ: 29.09.2004ರಂದು ಅರ್ಜಿದಾರ ಹಾಗೂ ಅವರ ಪರ ಜಿ.ಪಿ.ಎ. ಧಾರಕರಿಗೆ ಈ ಪ್ರಾಧಿಕಾರದಿಂದಲೂ ಸಹ ಪತ್ರ ಬರೆದು ಅವರ ಪರ ವಕೀಲರನ್ನು ದಿನಾಂಕ: 03.11.2004ರ ಒಳಗಾಗಿ ನೇಮಿಸುವಂತೆಯೂ ತಪ್ಪಿದಲ್ಲಿ ಏಕ ಪಕ್ಷೀಯವಾಗಿ ಮುಂದಿನ ಕ್ರಮ ಕೈಗೊಳ್ಳಲಾಗುವುದಾಗಿ ತಿಳಿಸಿ, ನೋಂದಾಯಿತ ಅಂಚೆಯ ಮೂಲಕ ಪತ್ರ ಬರೆಯಲಾಗಿ ಅವು ಅವರಿಗೆ ಜಾರಿಯಾಗದೇ ಅಂಚೆ ಲಕೋಟೆಗಳು ಮರಳಿ ಬಂದಿರುತ್ತವೆ. ಅನಂತರ ದಿನಾಂಕ: 08.12.2004ರಂದು ಶ್ರೀ ಆರ್.ಬಿ. ಕಾಂಟ್ರಕ್ಟರ್ ಮತ್ತು ಶ್ರೀ ಎಂ.ಜಿ. ಕಾಂಟ್ರಕ್ಟರ್ ಇವರುಗಳ ವಿಳಾಶಕ್ಕೆ ಈ ಬಗ್ಗೆ ಪತ್ರವನ್ನು ಬರೆದು ಪತ್ರ ಸ್ವೀಕರಿಸಿದ 15 ದಿನಗಳಲ್ಲಿ ಖುದ್ದಾಗಿ ಹಾಜರಾಗಿ ಅಥವಾ ಪತ್ರ ಮುಖೇನ ಮುಂದಿನ ವಿಚಾರಣಾ ದಿನಾಂಕವನ್ನು ನೀಡುವ ಬಗ್ಗೆ ಮಾಹಿತಿ ಪಡೆಯದಿದ್ದಲ್ಲಿ ಈ ಪ್ರಕರಣ ನಡೆಸಲು ಇಷ್ಟವಿಲ್ಲವೆಂದು ಭಾವಿಸಿ ಮುಂದಿನ ಸೂಕ್ತ ಕ್ರಮಕೈಗೊಳ್ಳಲಾಗುವುದಾಗಿ ತಿಳಿಸಲಾಗಿ, ಸದರಿ ಪತ್ರವನ್ನು ಶ್ರೀ ಆರ್.ಬಿ. ಕಾಂಟ್ರಕ್ಟರ್, ವಕೀಲರು, ಹುಬ್ಬಳ್ಳಿ ಇವರು ದಿನಾಂಕ: 14.12.2004ರಂದು ಸ್ವೀಕರಿಸಿರುತ್ತಾರೆ. ಅನಂತರ ಇತರೇ ವಾಹನಗಳೊಂದಿಗೆ ಈ ವಾಹನದ ಸಂಖ್ಯೆಯನ್ನು ಸೇರಿಸಿ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದರ ವಿರುದ್ಧ ಯಾರಾದರೂ ತಕರಾರು ಅಥವಾ ಹೇಳಿಕೆ ಸಲ್ಲಿಸುವುದಿದ್ದಲ್ಲಿ 15 ದಿನಗಳೊಳಗಾಗಿ ಈ ಪ್ರಾಧಿಕಾರಕ್ಕೆ ಲಿಖಿತವಾಗಿ ಸಲ್ಲಿಸತಕ್ಕದ್ದೆಂದು ತಪ್ಪಿದಲ್ಲಿ ಮುಂದಿನ ಸೂಕ್ತ ಕ್ರಮ ಕೈಗೊಳ್ಳಲಾಗುವುದೆಂದೂ, ದಿನಾಂಕ: 19.02.2005ರ ಕರಾವಳಿ ಮುಂಜಾವು ದಿನಪತ್ರಿಕೆಯಲ್ಲಿ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಲಾಗಿರುತ್ತದೆ. ಅದಾಗ್ಯೂ ಎದುರುದಾರರ ಪಕ್ಷದವರು ಪ್ರಾಧಿಕಾರದಲ್ಲಿ ಹಾಜರಾಗಿರುವುದಿಲ್ಲ.

8. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರು ಮಂಡಿಸಿದ ವಾದವನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

**9. ವಿವಾದಾಂಶಗಳು:**

1. ದಿನಾಂಕ:28.03.2004ರಂದು ಮುಂಜಾನೆ 5.30 ಗಂಟೆಗೆ ಜೋಯಿಡಾ ತಾಲ್ಲೂಕಿನ ಅನಮೋಡ ಗ್ರಾಮದಲ್ಲಿರುವ ಅಬಕಾರಿ ತನಿಖಾ ಠಾಣೆಯ ಹತ್ತಿರ ಆರೋಪಿತನು ತಾನು ಚಲಾಯಿಸುತ್ತಿದ್ದ ಟ್ಯಾಂಕರ್ ಸಂಖ್ಯೆ: ಕೆಎ-40/1777 ನೇದರಲ್ಲಿ 301 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿಯೂ ತಲಾ 180 ಮಿ.ಲೀ.ನ. 48 ಸೀಸೆಗಳಂತೆ ಒಟ್ಟು 14,448 ಓರಿಜಿನಲ್ ಚಾಯ್ಸ್ ವಿಸ್ಕಿಯ ಬಾಟ್ಲಿಗಳನ್ನು ಅನಧೀಕೃತವಾಗಿ ಸಾಗಿಸಿ, ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34 ಮತ್ತು 38ಎ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಮಾಡಿದ್ದಾರೆಂದು ಅಭಿಯೋಜನೆ ಪಕ್ಷದವರು ನಿಸ್ಸಂಶಯವಾಗಿ ರುಜುವಾತುಪಡಿಸುತ್ತಾರೆಯೇ, ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

**ಉತ್ತರಗಳು**

ಅಂಶ 1: ಸಕಾರಾತ್ಮಕವಾಗಿ.
ಅಂಶ 2: ನಕಾರಾತ್ಮಕವಾಗಿ.
ಅಂಶ 3: ಸಕಾರಾತ್ಮಕವಾಗಿ.

**ಕಾರಣಗಳು**

10. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಇಸಾಕ್‌ಬಾಯಿ ಲಾಡಶಾಹೇಬ್ ಶೇಖಜಿ, ಅಬಕಾರಿ ಉಪ ನಿರೀಕ್ಷಕರು, ಅನಮೋಡ ತನಿಖಾ ಠಾಣೆ ಇವರು ಈ ಪ್ರಾಧಿಕಾರದಲ್ಲಿ ದಿನಾಂಕ: 28.07.2004ರಂದು ಹಾಜರಾಗಿ ಪಿ.ಡಬ್ಲ್ಯೂ 1ರಂತೆ ಮಾನ್ಯ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ದಿನಾಂಕ: 28.03.2004ರಂದು ಬೆಳಗಿನ ಜಾವ 5.30ರ ಸುಮಾರಿಗೆ ತಾನು ತನಿಖಾ ಠಾಣೆಯಲ್ಲಿ ಕರ್ತವ್ಯದಲ್ಲಿದ್ದಾಗ ಒಂದು ಹಾಲು ತುಂಬುವ ಟ್ಯಾಂಕರ್ ಗೋವಾ ಕಡೆಯಿಂದ ಬರುತ್ತಿತ್ತೆಂದೂ, ಆ ಕಾಲಕ್ಕೆ ತಾನು ಟಿ.ಡಿ. ನಾಯ್ಕ, ಎಂ.ಬಿ. ಪಾವಸ್ಕರ ಮತ್ತು ಗೌರೀಶ ಎಂ. ಗೌಡ ತನಿಖಾ ಠಾಣೆಯಲ್ಲಿದ್ದೇವೆಂದೂ, ಮತ್ತು ವಾಹನಗಳನ್ನು ತಪಾಸಣೆ ಮಾಡುತ್ತಿದ್ದೆವೆಂದೂ, ಆ ಕಾಲದಲ್ಲಿ ಸ್ಥಳದಲ್ಲಿ ಪಂಚರು ಯಾರೂ ಸಿಗಲಿಲ್ಲವೆಂದೂ, ವಾಹನವನ್ನು ಚೆಕ್ ಮಾಡಿ ನೋಡಲಾಗಿ ತಮಗೆ ಸಂಶಯಬಂದು ಟ್ಯಾಂಕರಿನ ಮುಚ್ಚಳವನ್ನು ತೆಗೆದು ನೋಡಲಾಗಿ ರಟ್ಟಿನ ಬಾಕ್ಸ್‌ಗಳು ಇರುವುದು ಕಂಡು ಬಂತೆಂದೂ, ತಾವು ಚೆಕ್ ಮಾಡುತ್ತಿರುವ ಕಾಲಕ್ಕೆ ಟ್ಯಾಂಕರ್‌ನ್ನು ಚಲಾಯಿಸುತ್ತಿದ್ದ ಚಾಲಕ ಅಲ್ಲಿಂದ ಓಡಿ ಹೋದನೆಂದೂ, ಅತನನ್ನು ಹಿಡಿಯಲು ಪ್ರಯತ್ನಿಸಿದಾಗ ಆತನು ಕತ್ತಲೆಯಾಗಿದ್ದ ಕಾರಣ ಓಡಿ ಪರಾರಿಯಾದನೆಂದೂ, ಟ್ಯಾಂಕರಿನಲ್ಲಿ ಬಾಕ್ಸ್‌ಗಳನ್ನು ಎಣಿಸಲಾಗಿ 301 ಬಾಕ್ಸ್‌ಗಳಿದ್ದವೆಂದೂ, ಪ್ರತಿ ಬಾಕ್ಸ್‌ನ್ನು ಬಿಚ್ಚಿ ನೋಡಲಾಗಿ ಒಂದೊಂದು ರಟ್ಟಿನ ಪೆಟ್ಟಿಗೆಯಲ್ಲಿ 180 ಮಿ.ಲೀ.ನ 48 ಬಾಟ್ಲಿಗಳಂತೆ 14,448 ಬಾಟ್ಲಿಗಳಿದ್ದವೆಂದೂ, ಗೋವಾದಿಂದ ಕರ್ನಾಟಕ ಕಡೆಗೆ ಬರುತ್ತಿದ್ದ ಟ್ಯಾಂಕರ್ ವಾಹನದ ನಂ.ಕೆಎ-40/ 1777 ಆಗಿತ್ತೆಂದೂ, ವಾಹನವನ್ನು ಚೆಕ್ ಮಾಡಿ ನೋಡಲಾಗಿ ವಾಹನಕ್ಕೆ ಸಂಬಂಧಪಟ್ಟ ಮೂಲ ಆರ್.ಸಿ. ಪುಸ್ತಕ ಸಿಕ್ಕಿತೆಂದೂ, ಸದರಿ ಆರ್.ಸಿ. ಪುಸ್ತಕವನ್ನು ಪುರಾವೆ ಕುರಿತು ಜಪ್ತು ಮಾಡಿಲಾಯಿತೆಂದೂ, ಆ ಕಾಲಕ್ಕೆ ಟ್ಯಾಂಕರಿನಲ್ಲಿದ್ದ ವಾಹನದ ಕ್ಲೀನರ್‌ನನ್ನು ಹಿಡಿದು ದಸ್ತಗೀರ್ ಮಾಡಿದೆವೆಂದೂ, ಆತ ತನ್ನ ಹೆಸರನ್ನು ಮೆಹಬೂಬ್ ಶೇಖ್ ಎಂದು ಹೇಳಿದನೆಂದೂ, ನಂತರ ಜಪ್ತಾದ ಮುದ್ದೆ ಮಾಲಿನ ರಾಸಾಯನಿಕ ವಿಶ್ಲೇಷಣೆಯ ಕುರಿತು ಸ್ಯಾಂಪಲ್ ಬಾಟ್ಲಿ ತೆಗೆದು ಅವುಗಳಿಗೆ ಸೀಲ್‌ಬಂದ್ ಮಾಡಿ, ವಾಹನವನ್ನು ಸ್ಥಳದಲ್ಲಿ ಜಪ್ತು ಮಾಡಿ ಜಪ್ತಾದ ಮುದ್ದೆ ಮಾಲು ಹಾಗೂ ಒಬ್ಬ ಆರೋಪಿತನನ್ನು ಜೋಯಿಡಾ ಉಪ ವಲಯ ಅಬಕಾರಿ ಉಪ ನಿರೀಕ್ಷಕರಿಗೆ ಪಂಚನಾಮೆಯೊಂದಿಗೆ ಹಸ್ತಾಂತರಿಸಿದೆವೆಂದೂ, ಜಪ್ತಾದ ವಾಹನ ಹಾಗೂ ಮದ್ಯದ ಬಾಟ್ಲಿಗಳನ್ನು ತೋರಿಸಿದರೆ ತಾನು ಅದನ್ನು ಗುರ್ತಿಸುತ್ತೇನೆಂದೂ, ಆದ್ದರಿಂದ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗಿ ಪ್ರಾಧಿಕಾರದ ಮುಂದೆ ಪ್ರಾರ್ಥಿಸುತ್ತೇನೆಂದು ನುಡಿದಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ, ಈ ಪಂಚನಾಮೆಯನ್ನು ಬರೆದಿದ್ದು ತಾನೇ ಇರುತ್ತೇನೆಂದೂ, ತಾನು ಈ ಪಂಚನಾಮೆಯನ್ನು ಮುಂಜಾನೆ 5.30 ಗಂಟೆಗೆ ಬರೆಯಲು ಪ್ರಾರಂಭಿಸಿ 6.00 ಗಂಟೆಗೆ ಮುಗಿಸಲಾಯಿತೆಂದೂ, ಜಪ್ತಾದ ವಾಹನ ಮತ್ತು ಅದರ ದಾಖಲೆಗಳನ್ನು ಅಬಕಾರಿ ಉಪ ನಿರೀಕ್ಷಕರು, ಉಪವಲಯ ಜೋಯಿಡಾ ಇವರಿಗೆ ಹಸ್ತಾಂತರಿಸಿದ್ದೇನೆಂದೂ, ವಾಹನದ ಮಾಲೀಕರ ಹೆಸರನ್ನು ಪಂಚನಾಮೆಯಲ್ಲಿ ಬರೆದಿದ್ದು ನಿಜ, ಆದರೆ ಈಗ ನೆನಪಿಲ್ಲವೆಂದೂ, ವಾಹನವನ್ನು ತಾವು ಜಪ್ತು ಮಾಡಿಲ್ಲ ಎನ್ನುವುದು ಸರಿಯಲ್ಲವೆಂದೂ ಹಾಗೂ ಅಂಕಿ-ಸಂಖ್ಯೆಗೋಸ್ಕರ ಸುಳ್ಳು ಪ್ರಕರಣವನ್ನು ದಾಖಲಿಸಿದ್ದೇವೆ ಅನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

ಅನಂತರ ದಿನಾಂಕ: 25.08.2004ರಂದು ಮಾನ್ಯ ಅ.ಸ.ನಿ. ರವರ ವಿನಂತಿಯ ಮೇರೆಗೆ ಈ ಸಾಕ್ಷಿಗೆ ಪುನಃ ಕರೆಯಿಸಲಾಗಿ, ಮುಂದುವರಿದ ಮುಖ್ಯ ವಿಚಾರಣೆಯಲ್ಲಿ ತಾನು ಈ ಪ್ರಕರಣದಲ್ಲಿ ಜಪ್ತು ಮಾಡಿಕೊಂಡ ಟ್ಯಾಂಕರ್ ಸಂಖ್ಯೆ: ಕೆಎ-40/1777 ವಾಹನವು ಅಬಕಾರಿ ನಿರೀಕ್ಷಕರು, ರಾಜ್ಯ ಗುಪ್ತ ವಾರ್ತಾ ವಿಭಾಗ, ಬೆಂಗಳೂರು ರವರ ಗುನ್ನೆ ಸಂಖ್ಯೆ: 16/ 2003-04ರಲ್ಲಿ ಜಪ್ತಾಗಿದ್ದು ಇರುತ್ತದೆಂದೂ, ಈ ಬಗ್ಗೆ ಪ್ರಾಧಿಕೃತ ಅಧಿಕಾರಿಗಳು ಹಾಗೂ ಹೆಚ್ಚುವರಿ ಅಬಕಾರಿ ಅಧೀಕ್ಷಕರು, ಬೆಂಗಳೂರು ನಗರ ಜಿಲ್ಲೆ ಇವರು ಮಾಡಿದ ಆದೇಶದ ಪ್ರತಿಯನ್ನು ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ.

11. ದಿನಾಂಕ:28.07.2004ರಂದು ಈ ಪ್ರಕರಣದ ತನಿಖಾಧಿಕಾರಿಗಳಾದ ಇಕ್ಬಾಲ್ ಅಸ್ಲಾಮ್‌ಸಾಬ್ ದೌಡಿ, ಅಬಕಾರಿ ಉಪ ನಿರೀಕ್ಷಕರು, ಇವರು ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಪಿ.ಡಬ್ಲ್ಯೂ-2 ರಂತೆ ಉತ್ತರಿಸುತ್ತಾ, ದಿನಾಂಕ: 28.03.2004ರಂದು ತಾನು ತನ್ನ ಕಛೇರಿಯಲ್ಲಿ ಇರುವ ಕಾಲಕ್ಕೆ ಅನಮೋಡ ತನಿಖಾ ಠಾಣೆಯ ಅಬಕಾರಿ ಉಪ ನಿರೀಕ್ಷಕರು ಶ್ರೀ ಐ.ಎಲ್.ಶೇಖ್‌ಜಿ ಇವರು ತನ್ನ ಮುಂದೆ ಹಾಜರಾಗಿ ಒಂದು ಹಾಲಿನ ಟ್ಯಾಂಕರಿನಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ ಮದ್ಯದ ಪೆಟ್ಟಿಗೆಗಳು ಸಿಕ್ಕಿವೆ ಹಾಗೂ ಒಬ್ಬ ಆರೋಪಿ ಮತ್ತು ಜಪ್ತು ಮಾಡಿಕೊಂಡ ವಾಹನ ಹಾಗೂ ಮದ್ಯದ ಬಾಟ್ಲಿಗಳನ್ನು ತಂದು ತನ್ನ ಮುಂದೆ ಪಂಚನಾಮೆಯ ಸಹಿತ ಹಾಜರುಪಡಿಸಿದರೆಂದೂ, ತಾನು ಆರೋಪಿತರ ಮೇಲೆ ಪ್ರಕರಣ ದಾಖಲಿಸಿ ಪ್ರ.ಮಾ.ವರದಿಯನ್ನು ನ್ಯಾಯಾಲಯಕ್ಕೆ ಕಳುಹಿಸಿಕೊಟ್ಟೆನೆಂದೂ, ನಂತರ ದಸ್ತಗಿರ್ ಆದ ಆರೋಪಿತನನ್ನು ರಿಮಾಂಡ್‌ಯಾದಿಯೊಂದಿಗೆ ನ್ಯಾಯಾಲಯಕ್ಕೆ ಕಳುಹಿಸಿಕೊಟ್ಟೆನೆಂದೂ, ಮದ್ಯದ ಸ್ಯಾಂಪಲ್ ತೆಗೆದುಕೊಂಡ ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಬೆಂಗಳೂರಿಗೆ ಕಳುಹಿಸಿಕೊಟ್ಟೆನೆಂದೂ, ನಂತರ ಬೆಂಗಳೂರಿನಿಂದ ಬಂದ ರಾಸಾಯನಿಕ ಪರೀಕ್ಷೆ ವರದಿಯನ್ನು ಪ್ರಕರಣಕ್ಕೆ ಅಳವಡಿಸಿಕೊಂಡೆನೆಂದೂ, ನಂತರ ಆರೋಪಿತನ ಮೇಲೆ ಸಾಕಷ್ಟು ಪುರಾವೆಗಳು ಇದ್ದದ್ದು ಕಂಡುಬಂದಿರುವುದರಿಂದ ದೋಷಾರೋಪಣಾ ಪಟ್ಟಿಯನ್ನು ತಯಾರಿಸಿದೆನೆಂದೂ, ಮುದ್ದೆಮಾಲುಗಳನ್ನು ಈಗ ತನ್ನ ತಾಬಾದಲ್ಲಿದ್ದು ಅವುಗಳನ್ನು ತೋರಿಸಿದ್ದಲ್ಲಿ ತಾನು ಗುರ್ತಿಸಬಲ್ಲೆನೆಂದೂ, ಜಪ್ತಾದ ವಾಹನ ಸಂಖ್ಯೆ: ಕೆಎ-40/1777 ಆಗಿದ್ದು, ಅದನ್ನು ಗುರ್ತಿಸುವ ಬಗ್ಗೆ ಅರ್ಜಿದಾರರ ವಕೀಲರು ತಮ್ಮ ಆಕ್ಷೇಪಣೆ ಇರುವುದಿಲ್ಲವಾಗಿ ಹೇಳಿರುತ್ತಾರೆಂದೂ, ಜಪ್ತು ಮಾಡಿಕೊಂಡ ವಾಹನದ ಮೂಲ ನೋಂದಣಿ ಪತ್ರ ಟ್ಯಾಕ್ಸ್ ಕಾರ್ಡನ್ನು ಕಡತದಲ್ಲಿ ಅಳವಡಿಸಿಕೊಂಡು ಆರೋಪಣಾ ಪಟ್ಟಿಗೆ ಲಗತ್ತಿಸಿದೆನೆಂದೂ, ಕಾರಣ ಜಪ್ತಾದ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಪ್ರಾಧಿಕಾರಕ್ಕೆ ವಿನಂತಿಸಿರುತ್ತಾರೆ. ನಂತರ ಅರ್ಜಿದಾರ ಪರ ವಕೀಲರ ಪಾಟಿ ಸವಾಲಿನಲ್ಲಿ ವಾಹನದ ಮಾಲೀಕನ ಮೇಲೆ ಚಾರ್ಜಶೀಟ್‌ನ್ನು ಹಾಕಿಲ್ಲವೆಂದೂ, ವಾಹನದ ಮಾಲೀಕನನ್ನು ಹುಡುಕಲು ತಾನು ಬೆಂಗಳೂರಿಗೆ ಹೋಗಿಲ್ಲವೆಂದೂ, ವಾಹನದ ಕಾಗದ ಪತ್ರಗಳನ್ನು ಈ ಪ್ರಾಧಿಕಾರಕ್ಕೆ ಮುಂದೆ ಹಾಜರುಪಡಿಸಿಲ್ಲವೆಂದೂ, ಆದರೆ ಸಂಬಂಧಪಟ್ಟ ಕ್ರಿಮಿನಲ್ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತೇನೆಂದೂ, ಈ ವಾಹನವು ಹಾಲಿನ ವಾಹನವಾಗಿದ್ದು, ಅದಕ್ಕೂ ಮತ್ತು ಜಪ್ತು ಮಾಡಿದ ಮದ್ಯದ ಬಾಟ್ಲಿಗಳಿಗೂ ಯಾವುದೇ ಸಂಬಂಧವಿಲ್ಲ ಅನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

12. ಅನಂತರ ದಿನಾಂಕ: 25.08.2004ರಂದು ಮಹಾಬಳೇಶ್ವರ ಪಾವಸ್ಕರ, ಅಬಕಾರಿ ರಕ್ಷಕ ಇವರು ಈ ಪ್ರಾಧಿಕಾರದಲ್ಲಿ ಹಾಜರಾಗಿ ಮಾನ್ಯ ಎಡಿಪಿಯವರ ಮುಖ್ಯ ವಿಚಾರಣೆಗೆ ಪಿ.ಡಬ್ಲ್ಯೂ-2ರಂತೆ ಉತ್ತರಿಸುತ್ತಾ, ದಿನಾಂಕ:28.03.2004ರಂದು ಮುಂಜಾನೆ 6.00 ಗಂಟೆಯ ಸುಮಾರಿಗೆ ತಾನು ಮತ್ತು ಇಲಾಖಾ ಅಧಿಕಾರಿಯೊಂದಿಗೆ ಅನಮೋಡ ತನಿಖಾ ಠಾಣೆಯಲ್ಲಿ ಕರ್ತವ್ಯ ಮಾಡುತ್ತಿರುವಾಗ ಗೋವಾ ಕಡೆಯಿಂದ ಒಂದು ಕೇಸರಿ ಬಣ್ಣದ ನಂದಿನಿ ಹಾಲು ತುಂಬುವ ಟ್ಯಾಂಕರ್ ಬಂತೆಂದೂ, ಸದರಿ ವಾಹನವನ್ನು ನೋಡಿ ಸಂಶಯಗೊಂಡ ತಮ್ಮ ಅಧಿಕಾರಿಗಳು ವಾಹನವನ್ನು ಪರಿಶೀಲಿಸಲು ಹೇಳಿದರೆಂದೂ, ತಾನು ಮತ್ತು ಇತರೇ ಸಿಬ್ಬಂದಿಯವರು ಸದರಿ ವಾಹನದ ಒಳಗಡೆ ತಪಾಸಣೆ ಮಾಡಿ ನೋಡಿದಾಗ ರಟ್ಟಿನ ಬಾಕ್ಸ್‌ಗಳು ಅದರಲ್ಲಿ ಬಾಕ್ಸ್‌ಗಳು ಇರುವುದು ಕಂಡು ಬಂತೆಂದೂ, ಸದರಿ ರಟ್ಟಿನ ಬಾಕ್ಸ್‌ಗಳನ್ನು ಬಿಚ್ಚಿ ನೋಡಲಾಗಿ ಅದರ ಒಳಗಡೆ 180 ಮಿ.ಲೀ.ನ ಓರಿಜನಲ್ ಚಾಯ್ಸ್ ವಿಸ್ಕಿಯ ಬಾಟ್ಲಿಗಳು ಇರುವುದು ಕಂಡುಬಂತೆಂದೂ, ಅವುಗಳನ್ನು ಎಣಿಸಿ ನೋಡಲಾಗಿ ಒಟ್ಟು 301 ಬಾಕ್ಸ್‌ಗಳಿದ್ದು, ಅವುಗಳಲ್ಲಿ 14,448

ಬಾಟ್ಲಿಗಳಿರುವುದ ಕಂಡುಬಂತೆಂದೂ, ಅದರ ಅಂದಾಜು ಬೆಲೆ ರೂ.3 ಲಕ್ಷ ಆಗಬಹುದೆಂದೂ, ಸದರಿ ವಾಹನದ ನೋಂದಣಿ ಸಂಖ್ಯೆ: ಕೆಎ-40/1777 ಅಂತಾ ಇತ್ತೆಂದೂ, ಸದರಿ ವಾಹನದಲ್ಲಿ ಇದ್ದ ಓರಿಜಿನಲ್ ಚಾಯ್ಸ್ ವಿಸ್ಕಿಗಳ ಬಗ್ಗೆ ಯಾವುದೇ ಪಾಸ ಯಾ ಪರ್ಮಿಟ್ ಇರುವುದಿಲ್ಲವೆಂದೂ, ತಮ್ಮನ್ನು ನೋಡಿದಾಗ ವಾಹನದ ಚಾಲಕ ಅಲ್ಲಿಂದ ಪರಾರಿಯಾದನೆಂದೂ, ಕ್ಲೀನರ್‌ನನ್ನು ತಮ್ಮ ಅಧಿಕಾರಿಯವರು ದಸ್ತಗಿರ್ ಮಾಡಿರುತ್ತಾರೆಂದೂ, ಜಪ್ತಾದ ಓರಿಜಿನಲ್ ಚಾಯ್ಸ್ ಸಾರಾಯಿಗೆ ಸಂಬಂಧಪಟ್ಟಂತೆ ಹಾಗೂ ವಾಹನ ಸಂಖ್ಯೆ: ಕೆಎ-40/1777ನನ್ನು ಪಂಚರ ಸಮಕ್ಷಮದಲ್ಲಿ ಪಂಚನಾಮೆ ಮಾಡಿ ಜಪ್ತು ಮಾಡಿಕೊಂಡೆವೆಂದೂ, ಜಪ್ತು ಮಾಡಿಕೊಂಡ ವಾಹನ ಹಾಗೂ ಓರಿಜಿನಲ್ ಚಾಯ್ಸ್ ವಿಸ್ಕಿ ಬಾಟ್ಲಿಗಳನ್ನು ತೋರಿಸಿದರೆ ಗುರ್ತಿಸಬಲ್ಲೆನೆಂದೂ, ಜಪ್ತು ಮಾಡಿಕೊಂಡ ಸರಾಯಿಯನ್ನು ರಾಸಾಯನಿಕ ಪರೀಕ್ಷೆಗೋಸ್ಕರ ಪ್ರತ್ಯೇಕವಾಗಿ ತೆಗೆದುಕೊಂಡಿದ್ದು ಇರುತ್ತದೆ ಎಂದು ನುಡಿದಿರುತ್ತಾರೆ.

13. **ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:** ಪಿ.ಡಬ್ಲ್ಯೂ-1ನೇಯವರು ಮುಖ್ಯ ವಿಚಾರಣೆಯಲ್ಲಿ ಪಂಚನಾಮೆಯ ಪ್ರಕಾರ ತನ್ನ ಹೇಳಿಕೆಯನ್ನು ಸರಿಯಾಗಿಯೇ ನೀಡಿದ್ದು, ಅವರ ಹೇಳಿಕೆಯು ಪಂಚನಾಮೆಯ ಪ್ರಕಾರ ತಾಳೆ ಹೊಂದುತ್ತದೆ. ಆನಂತರ ಪಾಟಿ ಸವಾಲಿನಲ್ಲಿ ಪಂಚನಾಮೆಯನ್ನು ಬರೆದ ಸಮಯದ ಬಗ್ಗೆ ನೀಡಿದ ಹೇಳಿಕೆಯನ್ನು ಬಿಟ್ಟರೆ ಉಳಿದೆಲ್ಲ ಪ್ರಶ್ನೆಗಳಿಗೆ ಸರಿಯಾಗಿಯೇ ಉತ್ತರಿಸಿರುವುದು ಕಂಡುಬಂದಿದೆ. ಇನ್ನುಳಿದಂತೆ ಎದುರುದಾರರ ಪಕ್ಷದವರಿಗೆ ಸಹಾಯಕವಾಗುವಂತೆ ಯಾವುದೇ ಪ್ರಶ್ನೆಯನ್ನು ಕೇಳಿರುವುದು ಕಂಡುಬಂದಿರುವುದಿಲ್ಲ. ಅದೇ ರೀತಿ ಪಿ.ಡಬ್ಲ್ಯೂ-2 ನೇಯವರು ಸಹಾ ಫಿರ್ಯಾದುದಾರರು ತನಗೆ ಪ್ರಕರಣವನ್ನು ಮುಂದಿನ ತನಿಖೆಗೆ ವಹಿಸಿಕೊಟ್ಟ ಬಗ್ಗೆ ಹಾಗೂ ಮುಂದಿನ ತನಿಖೆ ನಡೆಯಿಸಿದ ಬಗ್ಗೆ ಹಾಗೂ ರಾಸಾಯನಿಕ ವರದಿಯನ್ನು ತರಿಸಿ, ಆರೋಪಣಾ ಪಟ್ಟಿಯನ್ನು ಸಲ್ಲಿಸಿದ ಬಗ್ಗೆ ಮುಖ್ಯ ವಿಚಾರಣೆಯಲ್ಲಿ ಸರಿಯಾಗಿಯೇ ಉತ್ತರಿಸಿದ್ದು, ಪಾಟಿ ಸವಾಲಿನಲ್ಲಿ ವಾಹನದ ಮಾಲೀಕನ ಮೇಲೆ ಚಾರ್ಜ್ ಶೀಟ್ ಹಾಕದಿರುವ ಬಗ್ಗೆ ವಿವರಿಸಿರುತ್ತಾರೆ. ಆದರೆ ಕ್ರಿಮಿನಲ್ ನ್ಯಾಯಾಲಯದಲ್ಲಿ ಆರೋಪಿಯು ನಿರ್ದೋಷಿಯಾಗಿದ್ದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಈ ಬಗ್ಗೆ ನಮ್ಮ ಗೌರವಾನ್ವಿತ ಉಚ್ಚನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯ ಕುಮಾರ ವಿರದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್‌ಆರ್-2002, ಕೆ.ಎ.ಆರ್.1375) ನೇದರಲ್ಲಿಯೂ ಈ ಕೆಳಗಿನಂತೆ ತೀರ್ಪಾಗಿದೆ.

Rejecting the Contention of the owner of the seized vehicle that non-filing of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation.

ಈ ತೀರ್ಪು ಈ ಪ್ರಕರಣಕ್ಕೆ ಅನ್ವಯಿಸುತ್ತದೆ. ಇದನ್ನು ಹೊರತುಪಡಿಸಿ ಎದುರುದಾರರಿಗೆ ಸಹಾಯಕವಾಗುವಂತಹ ಯಾವುದೇ ಪ್ರಶ್ನೆಯನ್ನು ಕೇಳಿರುವುದು ಕಂಡು ಬರುವುದಿಲ್ಲ. ಅದೇ ರೀತಿ ಪಿ.ಡಬ್ಲ್ಯೂ 3ನೇಯವರು ಸಹ ನುಡಿದಿರುವ ಸಾಕ್ಷ್ಯವು ಪಂಚನಾಮೆಗೆ ತಾಳೆಯಾಗುತ್ತಿದ್ದು, ಇವರಿಗೆ ಅರ್ಜಿದಾರರ ಪರ ವಕೀಲರು ಪಾಟಿ ಸವಾಲು ಮಾಡಿರುವುದಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ ಅಭಿಯೋಜನೆ ಪಕ್ಷದವರು ಈ ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

14. ಈ ಪ್ರಕರಣದಲ್ಲಿ ಜಪ್ತಿಯಾದ ವಾಹನದ ಮಾಲೀಕರು ತನ್ನ ಮುಗ್ಧತೆಯನ್ನು ಸಾಬೀತುಪಡಿಸಲು ಅವಕಾಶವಿದ್ದಾಗಲೂ ಸಹ ತನ್ನ ಯಾವುದೇ ರೀತಿಯ ಹೇಳಿಕೆಯನ್ನು ನೀಡದಿರುವುದನ್ನು ಗಮನಿಸಿದಾಗ ಈ ಕೃತ್ಯವನ್ನು ಆತನು ಒಪ್ಪಿಕೊಂಡಂತಾಗುತ್ತದೆ. ಅಲ್ಲದೇ ಗೌರವಾನ್ವಿತ ಉಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಜನ್ ಪಿಟೀಷನ್ ನಂ.338 ಆಫ್ 2000, ದಿನಾಂಕ: 01.10.2002 (ಅಬಕಾರಿ ನಿರೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ಇತರರು ವಿರುದ್ಧ ಪಿ. ವೆಂಕಟರಮಣ) ರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

"A close reading of conditions would imply that the person incharge of the vehicle if he were to misuse the vehicle for illegal transporting directely by himself or allowing others conciously, the owner becomes vicariously lible for the acts and he has to suffer the grave consequences of confiscation. The said excuse is not a ground to exonerate from the consequence of confiscation under section 43A (2) of the Act Confiscation."

ಈ ಮೇಲಿನ ತೀರ್ಪು ಈ ಪ್ರಕರಣಕ್ಕೆ ಅನ್ವಯಿಸುತ್ತದೆ. ಅಲ್ಲದೇ ಈ ವಾಹನವು ಈ ಹಿಂದೆ ಇಂತಹುದೇ ಪ್ರಕರಣದಲ್ಲಿ ಜಪ್ತಿಯಾಗಿ ಮಧ್ಯಂತರ ವಶಕ್ಕೆ ಬಿಡುಗಡೆಗೊಂಡು ಪ್ರಕರಣದ ವಿಚಾರಣೆ ನಡೆಯುತ್ತಿರುವಾಗಲೇ ಇನ್ನೊಮ್ಮೆ ಇದೇ ರೀತಿ ಅಪರಾಧದಲ್ಲಿ ವಾಹನವನ್ನು ಬಳಸಿರುವುದರಿಂದ ಸದರಿ ವಾಹನದ ಮಾಲೀಕರು ಪದೇಪದೇ ಅಪರಾಧವನ್ನೆಸಗುವ ಹವ್ಯಾಸವುಳ್ಳವರಾಗಿರುವುದಾಗಿ ಸ್ಪಷ್ಟವಾಗಿ ಕಂಡುಬರುತ್ತದೆ. ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತಿಯಾದ ವಾಹನ ಯಾರ ವಶದಲ್ಲಿತ್ತೋ ಅವರ ಗಮನಕ್ಕೆ ಬಾರದೇ ಮತ್ತು ಅವರು ಶಾಮೀಲಾಗದೇ ವಾಹನದಲ್ಲಿ ಅಕ್ರಮ ಮದ್ಯ ಸಾಗಾಣಿಕೆಯಾಗಿದೆ ಎಂಬುದನ್ನು ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಲು ಎದುರುದಾರರ ಪಕ್ಷದವರು ವಿಫಲರಾಗಿರುವುದು ಕಂಡುಬರುತ್ತದೆ.

15. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತು ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಮದ್ಯ ಮತ್ತು ಫೆನ್ನಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಶನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 181/2001 ದಿನಾಂಕ: 05.10.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 02/ 2002 ದಿನಾಂಕ: 14.02.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 107/ 2003, ದಿನಾಂಕ: 13.04.2005 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ,

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜೋಯಿಡಾ ಉಪ ವಲಯದ ಅಬಕಾರಿ ಉಪ ನಿರೀಕ್ಷಕರ ಗುನ್ಹೆ ಸಂಖ್ಯೆ: 05/2003-04, ದಿನಾಂಕ:28.03.2004ರಲ್ಲಿ ಜಪ್ತಿಯಾದಂತಹ ಒಂದು ಟ್ಯಾಂಕರ್ ಸಂಖ್ಯೆ: ಕೆಎ-40/1777 ನೇದನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಆದೇಶವು ಅರ್ಜಿದಾರರಿಗೆ ತಲುಪಿದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2005ನೇ ಇಸ್ವಿಯ ಮೇ ತಿಂಗಳ 31ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ ನಂತರ ಗಣಕೀಕೃತಗೊಳಿಸಿ ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಎ.ಎಸ್. ವಿಶ್ವರೂಪ**
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ.1: ಇಸಾಕ್‌ಬಾಯಿ ಲಾಡಸಾಹೇಬ್ ಶೇಖಜಿ, ಅ.ಉ.ನಿ.

ಪ್ರಾ.ಸಾ.ನಂ.2: ಇಕ್ಬಾಲ್ ಅಸ್ಲಾಮಸಾಬ್ ದೌಡಿ, ಅ.ಉ.ನಿ.

ಪ್ರಾ.ಸಾ.ನಂ.3: ಮಹಾಬಳೇಶ್ವರ ಪಾವಸ್ಕರ, ಅ.ರ.

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

-ಇಲ್ಲಾ-

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

ನಿಶಾನೆ ಪಿ1 : ಪಂಚನಾಮೆ.

ನಿಶಾನೆ ಪಿ1ಎ : ಪಂಚನಾಮೆಯ ಮೇಲಿನ ಪಿ.ಡಬ್ಲ್ಯೂ-1ನೇಯವರ ಸಹಿ.

ನಿಶಾನೆ ಪಿ1ಬಿ : ಪಂಚನಾಮೆಯ ಮೇಲಿನ ಪಿ.ಡಬ್ಲ್ಯೂ-2ನೇಯವರ ಸಹಿ.

ನಿಶಾನೆ ಪಿ2 : ಪ್ರ.ಮಾ. ವರದಿ.

ನಿಶಾನೆ ಪಿ2ಎ: ಪ್ರ.ಮಾ. ವರದಿ ಮೇಲಿನ ಪಿ.ಡಬ್ಲ್ಯೂ-2 ನೇಯವರ ಸಹಿ.

ನಿಶಾನೆ ಪಿ3 : ರಾಸಾಯನಿಕ ವಿಶ್ಲೇಷಣಾ ವರದಿ.

ನಿಶಾನೆ ಪಿ3ಎ : ರಾಸಾಯನಿಕ ವಿಶ್ಲೇಷಣಾ ವರದಿಯ ಮೇಲಿನ ಪಿ.ಡಬ್ಲ್ಯೂ-2ನೇಯವರ ಸಹಿ.

ನಿಶಾನೆ ಪಿ4 : ಪ್ರಾಧಿಕೃತ ಅಧಿಕಾರಿ ಹಾಗೂ ಹೆಚ್ಚುವರಿ ಅಬಕಾರಿ ಅಧೀಕ್ಷಕರು, ಬೆಂಗಳೂರು ನಗರ ಜಿಲ್ಲೆ ಇವರ ಆದೇಶ.

ನಿಶಾನೆ ಪಿ4ಎ : ಪ್ರಾಧಿಕೃತ ಅಧಿಕಾರಿ ಹಾಗೂ ಹೆಚ್ಚುವರಿ ಅಬಕಾರಿ ಅಧೀಕ್ಷಕರು, ಬೆಂಗಳೂರು ನಗರ ಜಿಲ್ಲೆ ಇವರ ಆದೇಶದ ಮೇಲಿನ ಪಿ.ಡಬ್ಲ್ಯೂ-2ನೇಯವರ ಸಹಿ.

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

-ಇಲ್ಲಾ-

**ಎ.ಎಸ್. ವಿಶ್ವರೂಪ**
ಪಿ.ಆರ್.1547 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಉತ್ತರ ಕನ್ನಡ ಜಿಲ್ಲೆ, ಕಾರವಾರ.

**IN THE COURT OF THE CIVIL JUDGE (JR.DN.) & J.M.F.C. KUDLIGI**

**Notice Dated: 1st October, 2005**

It is hereby notified for information of the public that the under mentioned property is pending as un-claimed and now it is to be disposed off according to law.

Therefore, it is hereby proclaimed that any one who has got a claim for the below mentioned peoperty may appear before this Court within six months from the date of publication and to prefer his or her claim, failing which the property will be confiscated and no claims thereafter will be entertained.

**LIST OF UN-CLAIMED PROPERTY**

| Sl. No. | P.R. No. | Case No. | Description of the property |
|---|---|---|---|
| 1. | 52/04 | C.C.No.312/04 | One red colour Bajaj M-80 Motor Cycle KA-04/E-4312. |
| 2. | 230/03 | P.F.No.40/03 | One old TVS Champ Chassi No. F 428997 |

**A. VIJAYAN**
PR-1548 CIVIL JUDGE (JR.DN.) & J.M.F.C.
KUDLIGI.

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441) ದಾವಾ ಪಂಚಾಯ್ತಿ ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಹುಬ್ಬಳ್ಳಿ ಪ್ರಾಂತ, ಹುಬ್ಬಳ್ಳಿ ಇವರ ನ್ಯಾಯಾಲಯದಲ್ಲಿ**

**(ನಂ.ಐ9/10 ಡಾಲರ್ಸ್ ಕಾಲೋನಿ, ಹೊಸ ಬಸ್‌ನಿಲ್ದಾಣ ಹತ್ತಿರ, ಗೋಕುಲ ರಸ್ತೆ, ಹುಬ್ಬಳ್ಳಿ)**

**ವ್ಯಾಜ್ಯ ಸಂಖ್ಯೆ: ಜಿಆರ್‌ಡಿ/ ಯುಬಿಎಫ್/ 2074/ 2005-06**

| **ವಾದಿ** | **ವಿರುದ್ಧ** | **ಪ್ರತಿವಾದಿಯರು** |
|---|---|---|
| ಪ್ರಧಾನ ವ್ಯವಸ್ಥಾಪಕರು,<br>ಶ್ರೀ ಶಾಂತಪ್ಪಣ್ಣಾ ಮಿರ್ಜಿಅರ್ಬನ್ ಕೋ-ಆಫ್.<br>ಬ್ಯಾಂಕ್ ಲಿ. ಚಿಕ್ಕೋಡಿ.<br>(ಮುಂಚೆ: ದಿ ಚಿಕ್ಕೋಡಿ ಅರ್ಬನ್ ಕೋ-ಆಫ್, ಬ್ಯಾಂಕ್ ಲಿ.<br>ಚಿಕ್ಕೋಡಿ) | 1.<br>2.<br><br><br>3. | ಶ್ರೀ ರಾಕೇಶ ವಿಜಯಕುಮಾರ ಜವಳಗಿ.<br>ಶ್ರೀಮತಿ ಶೋಭಾ ವಿಜಯಕುಮಾರ ಜವಳಗಿ,<br>ಮೇಲ್ಕಂಡವರೆಲ್ಲರೂ.<br>ಸಾ: ಹೋಟೆಲ ಆತಿಥಿ, ಪಿ.ಬಿ.ರೋಡ್, ಬೆನ್ನಾಳಿ, ತಾ:ಬೆಳಗಾವಿ.<br>ರಾಚೋಟಿ ಶಂಕರಶಾಸ್ತ್ರಿ ಹಿರೇಮಠ<br>ಸಾ: ಮಠಗಲ್ಲಿ, ಕಾಕತಿ ಜಿ: ಬೆಳಗಾವಿ. |

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ ನೋಟೀಸು**

1) ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ದಿನಾಂಕ: 30.09.2005ರ ವರೆಗೆ ಅಸಲು ಮತ್ತು ಬಡ್ಡಿ ಸೇರಿ ಒಟ್ಟು ರೂ.14,42,451/- (ರೂ. ಹದಿನಾಲ್ಕು ಲಕ್ಷ ನಲವತ್ತೆರಡು ಸಾವಿರದ ನಾಲ್ಕು ನೂರಾ ಐವತ್ತೊಂದು ಮಾತ್ರ)ಗಳನ್ನು ಹಾಗೂ ದಿನಾಂಕ: 01.10.2005 ರಿಂದ ಶೇ.19ರಂತೆ ಬಡ್ಡಿಯೊಂದಿಗೆ ವಸಲೂ ಮಾಡಲು ವಾದಿ ಪರ ತೀರ್ಪು ಮತ್ತು ಡಿಕ್ರಿ ಮಾಡಲು ಕೋರಿರುತ್ತಾರೆ.
2) ವಾದಿಯ ಈ ದಾವಾ ಅರ್ಜಿಯನ್ನು ದಾವೆ ಸಂಖ್ಯೆ: ಜಿಆರ್‌ಡಿ/ ಯುಬಿಎಫ್/ 2074/2005-06 ರನ್ವಯ ಈ ನ್ಯಾಯಾಲಯದ ಕಡತದಲ್ಲಿ ತೆಗೆದುಕೊಳ್ಳಲಾಗಿದೆ.
3) ಪ್ರತಿವಾದಿ ನಂ.1 ಇವರು ಪಡೆದಿರುವ ಸಾಲಕ್ಕೆ ಪ್ರಾಮಿಸರಿ ನೋಟ ಮತ್ತು ಸಾಲದ ಕರಾರು ಪತ್ರವನ್ನು ಬರೆದುಕೊಟ್ಟಿರುತ್ತಾರೆ ಹಾಗೂ 2 ಮತ್ತು 3ನೇ ಪ್ರತಿವಾದಿಗಳು 1ನೇ ಪ್ರತಿವಾದಿ ಪಡೆದಿರುವ ಸಾಲಕ್ಕೆ ಜಾಮೀನು ಪತ್ರ ಬರೆದುಕೊಟ್ಟಿರುತ್ತಾರೆ.
4) ಪ್ರತಿವಾದಿ ನಂ.1 ಇವರ ಆಸ್ತಿಯನ್ನು ಮಾರಾಟ ಮಾಡಿದರೂ ಬ್ಯಾಂಕಿಗೆ ಬರಬೇಕಾದ ಸಾಲದ ಮೊತ್ತ ಬರುವುದಿಲ್ಲ ಹಾಗೂ ಪ್ರತಿವಾದಿ ನಂ.2 ಮತ್ತು 3 ಇವರು ತಮ್ಮ ಹೆಸರಿನಲ್ಲಿರುವ ಆಸ್ತಿಯನ್ನು ಮಾರಾಟ ಯಾ ವರ್ಗಾವಣೆ ಮಾಡುವ ಉದ್ದೇಶ ಹೊಂದಿರುವ ಕಾರಣ ಅವರ ಆಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಲು ಆದೇಶಿಸಬೇಕೆಂದು ವಾದಿಯವರು ಕೋರಿರುತ್ತಾರೆ.
5) ವಾದಿಯು ಈ ದಾವಾ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರನ್ವಯ ಅರ್ಜಿಯನ್ನು ಸಲ್ಲಿಸಿ ಪ್ರತಿವಾದಿ ನಂ.1 ಇವರು ವಾದಿ ಬ್ಯಾಂಕಿಗೆ ಅಡವಿಟ್ಟಿರುವ ಸ್ಥಿರಾಸ್ತಿ ಮತ್ತು ಪ್ರತಿವಾದಿ ನಂ.2 ಮತ್ತು 3 ಇವರ ಹೆಸರಿನಲ್ಲಿರುವ, ದಾವಾ ಅರ್ಜಿಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಜಪ್ತಿ ಮಾಡಲು ತೀರ್ಪು ಪೂರ್ವ ಜಪ್ತಿ ಆದೇಶ (Attachment Before Judgement) ವನ್ನು ನೀಡುವಂತೆ ಕೋರಿರುತ್ತಾರೆ.
6) ಪ್ರತಿವಾದಿ ನಂ.1 ಇವರು ವಾದಿ ಬ್ಯಾಂಕಿಗೆ ಅಡವಿಟ್ಟಿರುವ ಸ್ಥಿರಾಸ್ತಿ ಮತ್ತು ಪ್ರತಿವಾದಿ ನಂ.2 ಮತ್ತು 3 ಇವರ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ ಪರಬಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ತೀರ್ಪು/ ಡಿಕ್ರಿ ನೀಡಿದ್ದರೂ ಸದರೀ ತೀರ್ಪು/ ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿ ಬ್ಯಾಂಕಿಗೆ ಬರಬೇಕಾದ ಮೊಬಲಗನ್ನು ವಸೂಲು ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಹಾಗೂ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಿದಲ್ಲಿ ಪ್ರತಿವಾದಿಗಳಿಗೆ ಯಾವುದೇ ರೀತಿಯ ಆರ್ಥಿಕ ನಷ್ಟ ಮತ್ತು ತೊಂದರೆಯಾಗುವುದಿಲ್ಲವೆಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.
7) ವಾದಿಯ ದಾವಾ ಅರ್ಜಿ ಮತ್ತು ಅಫಿಡೆವಿಟ್‌ನೊಂದಿಗೆ ದಾಖಲಿಸಿರುವ ಕಲಂ 103ರ ಅರ್ಜಿ ಮತ್ತು ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು, ಈ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿ ನಂ.1, 2 ಮತ್ತು 3ನೇ ಪ್ರತಿವಾದಿಯ ಶೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪು/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.
8) ಮೇಲೆ ವಿವರಿಸಿರುವ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರಕಾರದ ಅಧಿಸೂಚನೆ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ 220 ಸಿಎಲ್‌ಎಂ 2005, ದಿನಾಂಕ: 22.08.2005ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ.ಸಿ. ಕುರಬೇಟ, ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಹುಬ್ಬಳ್ಳಿ ಪ್ರಾಂತ, ಹುಬ್ಬಳ್ಳಿ ಆದ ನಾನು 1, 2 ಮತ್ತು 3ನೇ ಪ್ರತಿವಾದಿಯವರ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಆಸ್ತಿಯನ್ನು ಶರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1, 2 ಮತ್ತು 3ನೇ ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.14,42,451/- (ರೂ. ಹದಿನಾಲ್ಕು ಲಕ್ಷ ನಲವತ್ತೆರಡು ಸಾವಿರದ ನಾಲ್ಕು ನೂರಾ ಐವತ್ತೊಂದು ಮಾತ್ರ) ಗಳನ್ನು ವಾದಿಯ ಬ್ಯಾಂಕಿನಲ್ಲಿ ಅಮಾನತು ಖಾತೆಗೆ ದಿನಾಂಕ: 05.11.2005ರೊಳಗಾಗಿ ಜಮಾ ಮಾಡಿ, ಹೀಗೆ ಜಮಾ ಮಾಡಿದ ಅಧಿಕೃತ ಚಲನ/ ರಶೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯರು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗಿನ ಶೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರ ಆಸ್ತಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡುತ್ತವೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

ಪ್ರಕರಣವನ್ನು ದಿನಾಂಕ: 07.11.2005ರಂದು ಮುಂಜಾನೆ 11.00ಕ್ಕೆ ವಿಚಾರಣೆಗೆ ಹುಬ್ಬಳ್ಳಿ ನ್ಯಾಯಾಲಯದಲ್ಲಿ ನಿಗದಿಪಡಿಸಲಾಗಿದೆ.

**ಶೆಡ್ಯೂಲ್ ಸ್ಥಿರಾಸ್ತಿಯ ವಿವರ**

**ಪ್ರತಿವಾದಿ ನಂ.1 ಇವರ ಹೆಸರಿನಲ್ಲಿರುವ ಆಸ್ತಿಗಳ ವಿವರ**

| ಅ.ನಂ. | ಆಸ್ತಿಯ ಸ್ಥಳ | ಆಸ್ತಿಯ ವಿವರ | ಆಸ್ತಿಯ ನಂಬರ್ | ಕ್ಷೇತ್ರ ಎ-ಗುಂ-ಅ | ಆಕಾರ ರೂ. |
|---|---|---|---|---|---|
| 1. | ಬೆನ್ನಾಳಿ | ಮನೆ | ವ್ಹಿಪಿಸಿ ನಂ.796/1047/ ಎ | 4-16-12 | 150-00 |
| 2. | ಬೆನ್ನಾಳಿ | ಮನೆ | ವ್ಹಿಪಿಸಿ ನಂ.797/1047/ಬಿ | 00-07-00 | 150-00 |

**ಪ್ರತಿವಾದಿ ನಂ.2 ಇವರ ಹೆಸರಿನಲ್ಲಿರುವ ಆಸ್ತಿಗಳ ವಿವರ**

| ಅ.ನಂ. | ಆಸ್ತಿಯ ಸ್ಥಳ | ಆಸ್ತಿಯ ವಿವರ | ಆಸ್ತಿಯ ನಂಬರ್ ರಿ.ಸ. ನಂಬರುಗಳು | ಕ್ಷೇತ್ರ ಎ-ಗುಂ-ಅ | ಆಕಾರ ರೂ. ಪೈ. |
|---|---|---|---|---|---|
| 1. | ಹೊನಗಾ | ಖುಲ್ಲಾಜಾಗಾ | 446/1ಬ | 0-06-04 | 0-20 |
| 2. | ” | ” | 448 | 0-06-08 | 0-27 |
| 3. | ” | ” | 449/1 | 0-07-00 | 0-29 |
| 4. | ” | ” | 446 | 4-04-00 | 2-46 |
| 5. | ” | ” | 370/2 | 0-09-00 | 1-60 |
| 6. | ” | ” | 467 | 1-09-00 | 1-57 |
| 7. | ” | ” | 468 | 0-32-00 | 1-26 |
| 8. | ” | ” | 469 | 1-02-00 | 1-18 |

**ಪ್ರತಿವಾದಿ ನಂ.3 ಇವರ ಹೆಸರಿನಲ್ಲಿರುವ ಆಸ್ತಿಗಳ ವಿವರ**

| ಅ.ನಂ. | ಆಸ್ತಿಯ ಸ್ಥಳ | ಆಸ್ತಿಯ ವಿವರ | ಆಸ್ತಿಯ ನಂಬರ್ | ಕ್ಷೇತ್ರ | ಆಕಾರ ರೂ. ಪೈ. |
|---|---|---|---|---|---|
| 1. | ಕಾಕತಿ | ಖುಲ್ಲಾಜಾಗಾ | ವ್ಹಿಪಿಸಿ ನಂ.322/ಬಿ/1 | 54'x30' | 40-00 |

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 04.10.2005ರಂದು ನೀಡಿರುತ್ತೇನೆ.

ಸ್ಥಳ: ಕ್ಯಾಂಪ್, ಬೆಳಗಾವಿ.

**ಬಿ.ಸಿ. ಕುರಬೇಟ**
ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441)
ದಾವಾ ಪಂಚಾಯ್ತಿ ನ್ಯಾಯಾಲಯದ ಕ.ರಾ.ಸ.ಪ. ಬ್ಯಾಂಕುಗಳ
ಮಹಾಮಂಡಳ ನಿ., ಹುಬ್ಬಳ್ಳಿ ಪ್ರಾಂತ, ಹುಬ್ಬಳಿ.

ಪಿ.ಆರ್.1549

**ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441) ದಾವಾ ಪಂಚಾಯ್ತಿ ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಹುಬ್ಬಳ್ಳಿ ಪ್ರಾಂತ, ಹುಬ್ಬಳ್ಳಿ ಇವರ ನ್ಯಾಯಾಲಯದಲ್ಲಿ**

**(ನಂ.ಐ9/10 ಡಾಲರ್ಸ್ ಕಾಲೋನಿ, ಹೊಸಬಸ್ ನಿಲ್ದಾಣ ಹತ್ತಿರ, ಗೋಕುಲ ರಸ್ತೆ, ಹುಬ್ಬಳ್ಳಿ)**

**ವ್ಯಾಜ್ಯ ಸಂಖ್ಯೆ: ಜಿಆರ್‌ಡಿ/ ಯುಬಿಎಫ್/ 2075/ 2005-06**

**ವಾದಿ** — **ವಿರುದ್ಧ** — **ಪ್ರತಿವಾದಿಯರು**

ಪ್ರಧಾನ ವ್ಯವಸ್ಥಾಪಕರು,
ಶ್ರೀ ಶಾಂತಪ್ಪಣ್ಣಾ ಮಿರ್ಜಿಅರ್ಬನ್ ಕೋ-ಆಫ್.
ಬ್ಯಾಂಕ್ ಲಿ. ಚಿಕ್ಕೋಡಿ.
(ಮುಂಚಿ: ದಿ ಚಿಕ್ಕೋಡಿ ಅರ್ಬನ್ ಕೋ-ಆಫ್,
ಬ್ಯಾಂಕ್ ಲಿ. ಚಿಕ್ಕೋಡಿ)

1. ಮೆ: ಬಳವಂತ ಆಟೋಮೋಬೈಲ್ಸ್, ನಿಪ್ಪಾಣಿ, ಇದರ ಭಾಗೀದಾರರು:
ಅ) ಶ್ರೀ ಸಮ್ರಾಟ ಅಶೋಕ ಮಿರ್ಜೆ.
ಬ) ಶ್ರೀ ಅಶೋಕ ಬಳವಂತ ಮಿರ್ಜೆ.
ಕ) ಶ್ರೀಮತಿ ಸುಗಂಧಾ ಅಶೋಕ ಮಿರ್ಜೆ.
ಡ) ಶ್ರೀಮತಿ ವೈಶಾಲಿ ಸಮ್ರಾಟ ಮಿರ್ಜೆ.
ವಿಳಾಸ: ಅರಿಹಂತ ಆಟೋಮೋಬೈಲ್ಸ್, ಕೊಲ್ಹಾಪುರ ಕ್ರಾಸ್, ಬೆಳಗಾವಿ.

2. ಶ್ರೀ ಮಹಾದೇವ ಸಖಾರಾಮ ಮಾಳಿ,
ವಿಳಾಸ: ಬೆಳಗಾಂವ ನಾಕಾ, ನಿಪ್ಪಾಣಿ ತಾ: ಚಿಕ್ಕೋಡಿ.

3. ಶ್ರೀ ಅಶೋಕ ಬಳವಂತ ಮಿರ್ಜೆ.
ವಿಳಾಸ: ಅರಿಹಂತ ಆಟೋಮೋಬೈಲ್ಸ್, ಕೊಲ್ಹಾಪುರ ಕ್ರಾ.ಸ. ಬೆಳಗಾವಿ.

## 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ ನೋಟೀಸು

1) ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 70ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ದಿನಾಂಕ: 30.09.2005ರ ವರೆಗೆ ಅಸಲು ಮತ್ತು ಬಡ್ಡಿ ಸೇರಿ ಒಟ್ಟು ರೂ.62,29,677/- (ರೂ. ಅರವತ್ತೆರಡು ಲಕ್ಷ ಇಪ್ಪತ್ತೊಂಬತ್ತು ಸಾವಿರದ ಆರುನೂರಾ ಎಪ್ಪತ್ತೇಳು ಮತ್ತು ಪೈಸೆ ನಲವತ್ತೊಂಬತ್ತು ಮಾತ್ರ)ಗಳನ್ನು ಹಾಗೂ ದಿನಾಂಕ:01.10.2005 ರಿಂದ ಶೇ.16ರಂತೆ ಬಡ್ಡಿಯೊಂದಿಗೆ ವಸಲೂ ಮಾಡಲು ವಾದಿ ಪರ ತೀರ್ಪು ಮತ್ತು ಡಿಕ್ರಿ ಮಾಡಲು ಕೋರಿರುತ್ತಾರೆ.

2) ವಾದಿಯ ಈ ದಾವಾ ಅರ್ಜಿಯನ್ನು ದಾವೆ ಸಂಖ್ಯೆ: ಜಿಆರ್‌ಡಿ/ ಯುಬಿಎಫ್/ 2075/2005-06 ರನ್ವಯ ಈ ನ್ಯಾಯಾಲಯದ ಕಡತದಲ್ಲಿ ತೆಗೆದುಕೊಳ್ಳಲಾಗಿದೆ.

3) 1 ಅ ರಿಂದ ಡ ಪ್ರತಿವಾದಿಗಳು ತಾವು ಪಡೆದಿರುವ ಸಾಲಕ್ಕೆ ಪ್ರಾಮಿಸರಿ ನೋಟ ಮತ್ತು ಸಾಲದ ಕರಾರು ಪತ್ರವನ್ನು ಬರೆದುಕೊಟ್ಟಿರುತ್ತಾರೆ ಹಾಗೂ ಪ್ರತಿವಾದಿ ನಂ.2 ಮತ್ತು 3 ಇವರು 1ನೇ ಪ್ರತಿವಾದಿಗಳು ಪಡೆದಿರುವ ಸಾಲಕ್ಕೆ ಜಾಮೀನು ಪತ್ರ ಬರೆದುಕೊಟ್ಟಿರುತ್ತಾರೆ.

4) ಪ್ರತಿವಾದಿ 1ಅ ಇವರ ಆಸ್ತಿಯನ್ನು ಮಾರಾಟ ಮಾಡಿದರೂ ಬ್ಯಾಂಕಿಗೆ ಬರಬೇಕಾದ ಸಾಲದ ಮೊತ್ತ ಬರುವುದಿಲ್ಲ ಹಾಗೂ ಪ್ರತಿವಾದಿ ನಂ.2 ಮತ್ತು 3 ಇವರು ತಮ್ಮ ಹೆಸರಿನಲ್ಲಿರುವ ಆಸ್ತಿಯನ್ನು ಮಾರಾಟ ಯಾ ವರ್ಗಾವಣೆ ಮಾಡುವ ಉದ್ದೇಶ ಹೊಂದಿರುವ ಕಾರಣ ಅವರ ಆಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಲು ಆದೇಶಿಸಬೇಕೆಂದು ವಾದಿಯವರು ಕೋರಿರುತ್ತಾರೆ.

5) ವಾದಿಯು ಈ ದಾವಾ ಅರ್ಜಿಯೊಂದಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರನ್ವಯ ಅರ್ಜಿಯನ್ನು ಸಲ್ಲಿಸಿ ಪ್ರತಿವಾದಿ ನಂ.1 ಅ ರಿಂದ ಡ ಇವರು ವಾದಿ ಬ್ಯಾಂಕಿಗೆ ಅಡವಿಟ್ಟಿರುವ ಸ್ಥಿರಾಸ್ತಿ ಮತ್ತು ಪ್ರತಿವಾದಿ ನಂ.2 ಮತ್ತು 3 ಇವರ ಹೆಸರಿನಲ್ಲಿರುವ, ದಾವಾ ಅರ್ಜಿಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಜಪ್ತಿ ಮಾಡಲು ತೀರ್ಪು ಪೂರ್ವ ಜಪ್ತಿ ಆದೇಶ (Attachment Before Judgement) ವನ್ನು ನೀಡುವಂತೆ ಕೋರಿರುತ್ತಾರೆ.

6) ಪ್ರತಿವಾದಿ ನಂ.1ಅ ರಿಂದ ಡ ಇವರು ವಾದಿ ಬ್ಯಾಂಕಿಗೆ ಅಡವಿಟ್ಟಿರುವ ಸ್ಥಿರಾಸ್ತಿ ಮತ್ತು ಪ್ರತಿವಾದಿ ನಂ.2 ಮತ್ತು 3 ಇವರ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ ಮಾಡಲು/ ಪರಬಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ತೀರ್ಪು/ ಡಿಕ್ರಿ ನೀಡಿದ್ದರೂ ಸದರೀ ತೀರ್ಪು/ ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿ ಬ್ಯಾಂಕಿಗೆ ಬರಬೇಕಾದ ಮೊಬಲಗನ್ನು ವಸೂಲು ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಹಾಗೂ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಿದಲ್ಲಿ ಪ್ರತಿವಾದಿಗಳಿಗೆ ಯಾವುದೇ ರೀತಿಯ ಆರ್ಥಿಕ ನಷ್ಟ ಮತ್ತು ತೊಂದರೆಯಾಗುವುದಿಲ್ಲವೆಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

7) ವಾದಿಯ ದಾವಾ ಅರ್ಜಿ ಮತ್ತು ಅಫಿಡೆವಿಟ್‌ನೊಂದಿಗೆ ದಾಖಲಿಸಿರುವ ಕಲಂ 103ರ ಅರ್ಜಿ ಮತ್ತು ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು, ಈ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿ ನಂ.1ಅ, 2 ಮತ್ತು 3ನೇ ಪ್ರತಿವಾದಿಯ ಶೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪು/ ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

8) ಮೇಲೆ ವಿವರಿಸಿರುವ ಪರಿಸ್ಥಿತಿಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

### ಆದೇಶ

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರಕಾರದ ಅಧಿಸೂಚನೆ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ 220 ಸಿಎಲ್‌ಎಂ 2005, ದಿನಾಂಕ: 22.08.2005ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಬಿ.ಸಿ. ಕುರಬೇಟ, ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಹುಬ್ಬಳ್ಳಿ ಪ್ರಾಂತ, ಹುಬ್ಬಳ್ಳಿ ಆದ ನಾನು 1ಅ, 2 ಮತ್ತು 3ನೇ ಪ್ರತಿವಾದಿಯವರ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಆಸ್ತಿಯನ್ನು ಶರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

1ಅ, 2 ಮತ್ತು 3ನೇ ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.62,29,677-49 (ರೂ. ಅರವತ್ತೆರಡು ಲಕ್ಷ ಇಪ್ಪತ್ತೊಂಬತ್ತು ಸಾವಿರದ ಆರು ನೂರಾ ಎಪ್ಪತ್ತೇಳು ಮತ್ತು ಪೈಸೆ ನಲವತ್ತೊಂಬತ್ತು ಮಾತ್ರ) ಗಳನ್ನು ವಾದಿಯ ಬ್ಯಾಂಕಿನಲ್ಲಿ ಅಮಾನತು ಖಾತೆಗೆ ದಿನಾಂಕ: 05.11.2005ರೊಳಗಾಗಿ ಜಮಾ ಮಾಡಿ, ಹೀಗೆ ಜಮಾ ಮಾಡಿದ ಅಧಿಕೃತ ಚಲನ/ ರಶೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯರು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗಿನ ಶೆಡ್ಯೂಲಿನಲ್ಲಿ ನಮೂದಿಸಿರುವ ಸ್ಥಿರ ಆಸ್ತಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡುತ್ತವೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

ಪ್ರಕರಣವನ್ನು ದಿನಾಂಕ: 07.11.2005ರಂದು ಮುಂಜಾನೆ 11.00ಕ್ಕೆ ವಿಚಾರಣೆಗೆ ಹುಬ್ಬಳ್ಳಿ ನ್ಯಾಯಾಲಯದಲ್ಲಿ ನಿಗದಿಪಡಿಸಲಾಗಿದೆ.

### ಶೆಡ್ಯೂಲ್ ಸ್ಥಿರಾಸ್ತಿಯ ವಿವರ

### ಪ್ರತಿವಾದಿ ನಂ.1ಅ ಇವರ ಹೆಸರಿನಲ್ಲಿರುವ ಆಸ್ತಿಗಳ ವಿವರ

| ಅ.ನಂ. | ಆಸ್ತಿಯ ಸ್ಥಳ | ಆಸ್ತಿಯ ವಿವರ | ಆಸ್ತಿಯ ನಂಬರ್ | ಕ್ಷೇತ್ರ ಎ-ಗುಂ-ಅ | ಆಕಾರ ರೂ. |
|---|---|---|---|---|---|
| 1. | ನಿಪ್ಪಾಣಿ | ಪ್ಲಾಟ್ | ರಿ.ಸ.ನಂ.44/1 ರಿಂದ 4... ಪ್ಲಾಟ್ ನಂ.34ಎ ಮತ್ತು ಬಿ | 6-08 ಪೈಕಿ 9707.50 ಚ.ಅಡಿ. | - |
| 2. | ನಿಪ್ಪಾಣಿ | ಪ್ಲಾಟ್ | ರಿಸ.ನಂ.158/ 3+4+5 ಪ್ಲಾಟ್ ನಂ.189. | 16-11 ಪೈಕಿ 01-01-2 | 26-19 |
| 3. | ಬೈಲಹೊಂಗಲ | ಖುಲ್ಲಾಜಾಗಾ | ರಿಸ.ನಂ.238/1 | 3-19 ಪೈಕಿ 1-29-08 | 7-07 |

**ಪ್ರತಿವಾದಿ ನಂ.2 ಇವರ ಹೆಸರಿನಲ್ಲಿರುವ ಆಸ್ತಿಗಳ ವಿವರ**

| ಅ.ನಂ. | ಆಸ್ತಿಯ ಸ್ಥಳ | ಆಸ್ತಿಯ ವಿವರ | ಆಸ್ತಿಯ ನಂಬರ್ | ಕ್ಷೇತ್ರ ಎ-ಗುಂ | ಆಕಾರ ರೂ. ಪೈ. |
|---|---|---|---|---|---|
| 1. | ನಿಪ್ಪಾಣಿ | ಪ್ಲಾಟ್ | ರಿಸ.ನಂ.59ಅ/ 21 | 3-03 ಪೈಕಿ 1/8 ಹಿಸ್ಸಾ | 00-05 |

**ಪ್ರತಿವಾದಿ ನಂ.3 ಇವರ ಹೆಸರಿನಲ್ಲಿರುವ ಆಸ್ತಿಗಳ ವಿವರ**

| ಅ.ನಂ. | ಆಸ್ತಿಯ ಸ್ಥಳ | ಆಸ್ತಿಯ ವಿವರ | ಆಸ್ತಿಯ ನಂಬರ್ | ಕ್ಷೇತ್ರ | ಆಕಾರ ರೂ. ಪೈ. |
|---|---|---|---|---|---|
| 1. | ನಿಪ್ಪಾಣಿ | ಪ್ಲಾಟ್ | ರಿಸ.ನಂ.158/ 3+4+5 ಪ್ಲಾಟ್ ನಂ.276 | 16-11 ಪೈಕಿ 01-01-2 | 26-19 |
| 2. | ಬೆಳಗಾವಿ | ಮನೆ | ಸಿಟಿಎಸ್ ನಂ.4823/ಎ-10 | 1161 ಚ.ಮೀ. | |
| 3. | ಬೈಲಹೊಂಗಲ | ಖುಲ್ಲಾಜಾಗಾ | ರಿಸ.ನಂ.238/1 | 3-19 ಪೈಕಿ 1-29-08 | 7-07 |

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 04.10.2005ರಂದು ನೀಡಿರುತ್ತೇನೆ.

ಸ್ಥಳ: ಕ್ಯಾಂಪ್, ಬೆಳಗಾವಿ.

**ಬಿ.ಸಿ. ಕುರಬೇಟ**
ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿಯಮ 441)
ದಾವಾ ಪಂಚಾಯ್ತಿ ನ್ಯಾಯಾಲಯದ ಕ.ರಾ.ಸ.ಪ. ಬ್ಯಾಂಕುಗಳ
ಮಹಾಮಂಡಳ ನಿ., ಹುಬ್ಬಳ್ಳಿ ಪ್ರಾಂತ, ಹುಬ್ಬಳಿ.

ಪಿ.ಆರ್.1550

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ. ಕಾಅದಾ:ಕಾನಪ:ಸಿಆರ್-267/ 05**

**ಅರ್ಜಿದಾರರು**

ಶ್ರೀಮತಿ ರೇಣುಕಮ್ಮ,
ಕೋಂ/ ಲೇ: ಹನುಮಂತಪ್ಪ,
ವಾಸ: ಬಸ್ಸೇನಹಳ್ಳಿ ಗ್ರಾಮ, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ.

**ಪ್ರತಿವಾದಿಗಳು:**

1. ಆರ್.ಬಸಪ್ಪ ಬಿನ್ ಸಿದ್ದಲಿಂಗಪ್ಪ, ಟ್ರ್ಯಾಕ್ಟರ್ ಮಾಲೀಕರು, ನಂ.ಕೆ.ಎ.17/ ಟಿ.4957-4958.
   ವಾಸ: ದೊಣ್ಣೇಹಳ್ಳಿ ಗ್ರಾಮ, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ.
2. ದಿ ಡಿವಿಜನಲ್ ಮ್ಯಾನೇಜರ್, ಓರಿಯಂಟಲ್ ಇನ್ಶೂರೆನ್ಸ್ ಕಂ.ಲಿ., ಎನ್ಕೆ ಕಾಂಪ್ಲೆಕ್ಸ್, ಕೇಶವಪುರ, ಹುಬ್ಬಳ್ಳಿ.

**ಪ್ರಕಟಣೆ**

ಶ್ರೀಮತಿ ರೇಣುಕಮ್ಮ ಹನುಮಂತಪ್ಪ ಇವರ ಹೆಂಡತಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನುಮಂತಪ್ಪ ರವರು ಒಂದನೇ ಪ್ರತಿವಾದಿಗಳಾದ ಆರ್. ಬಸಪ್ಪ ಇವರ ಟ್ರ್ಯಾಕ್ಟರ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1458

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ

**ಪ್ರ.ಸಂ. ಕಾಅದಾ:ಕಾನಪ:ಸಿಆರ್-268/ 05, ದಿನಾಂಕ: 7ನೇ ಅಕ್ಟೋಬರ್, 2005**

**ಅರ್ಜಿದಾರರು**

1. ಕು: ಚಿನ್ಮಯಿ, ಬಿನ್ ಲೇ: ಕಲ್ಯಾಣ ಕುಮಾರ್,
2 ಶ್ರೀಮತಿ ಬೇಬಿ ಬಿನ್ ಲೇ: ಕಲ್ಯಾಣ ಕುಮಾರ್,
   ಇಬ್ಬರ ವಾಸ: ಕೇರ್ಆಫ್ ಬಿ.ಎನ್. ಮಂಜುನಾಥ, ಸರಸ್ವತಿ ಬಡಾವಣೆ, ಮನೆ ನಂ.780/1 ನಿಟ್ಟುವಳ್ಳಿ ರಸ್ತೆ, ದಾವಣಗೆರೆ.

**ಪ್ರತಿವಾದಿಗಳು:**

1. ವ್ಯವಸ್ಥಾಪಕ ನಿರ್ದೇಶಕರು,
   ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಸಾರಿಗೆ ಭವನ, ಶಾಂತಿನಗರ, ಬೆಂಗಳೂರು.
2. ವ್ಯವಸ್ಥಾಪಕ ನಿರ್ದೇಶಕರು,
   ಇವರ ಪ್ರತಿನಿಧಿತ್ವ, ವಿಭಾಗೀಯ ನಿಯಂತ್ರಣಾಧಿಕಾರಿ, ಕ.ರಾ.ರ.ಸಾ.ಸಂಸ್ಥೆ, ದಾವಣಗೆರೆ ವಿಭಾಗ, ದಾವಣಗೆರೆ.

**ಪ್ರಕಟಣೆ**

ಕು: ಚಿನ್ಮಯಿ ಹಾಗೂ ಶ್ರೀಮತಿ ಎಂ. ಬೇಬಿ ಇವರುಗಳಾದ ತಾವು ಮೃತ ಕಲ್ಯಾಣ ಕುಮಾರ್ ಇವರ ಮಗಳು ಮತ್ತು ಹೆಂಡತಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕಲ್ಯಾಣ ಕುಮಾರ್ ರವರು ಒಂದನೇ

ಪ್ರತಿವಾದಿಗಳಾದ ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಆರ್.ಟಿ.ಸಿ. ಬೆಂಗಳೂರು ಬಸ್ಸಿನಲ್ಲಿ ಚಾಲಕರಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್.1459

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ, ದಾವಣಗೆರೆ.

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

## ಅಧಿಸೂಚನೆ

### ಸಂ. ಜಿಸಕಅ: ಬೆಂಗ್ರಾ.ಕ.ಅ: ಸಿಆರ್:31/05-06, ಬೆಂಗಳೂರು, ದಿನಾಂಕ:21ನೇ ಸೆಪ್ಟೆಂಬರ್, 2005

**ವಿಷಯ :** ಭಾರತ ಸರ್ಕಾರದ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ರ ಅನುಷ್ಠಾನದ ಬಗ್ಗೆ.

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಅಧಿನಿಯಮ 2005ರ (Central Act 22 of 2005) ಸೆಕ್ಷನ್ 5(1), 5(2) ಮತ್ತು 19(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಮಾಜ ಕಲ್ಯಾಣ ಇಲಾಖೆಯ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಕ್ರಮವಾಗಿ ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ಈ ಕೆಳಕಂಡಂತೆ ಸರ್ಕಾರದಿಂದ ನೇಮಿಸಬೇಕಾಗಿರುತ್ತದೆ. ಅದರಂತೆ ಜಿಲ್ಲಾ ಮಟ್ಟದ ಹಂತದಲ್ಲಿ ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

**ತಾಲ್ಲೂಕು ಮಟ್ಟದಲ್ಲಿ**

| ಕ್ರ. ಸಂ. | ಇಲಾಖೆಯ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(2)ರ ಪ್ರಕಾರ ಸಹಾಯಕ ಸಾರ್ವಜನಿಕ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 19(1)ರ ಪ್ರಕಾರ ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1. | ಸಮಾಜ ಕಲ್ಯಾಣ ಇಲಾಖೆ | ಎಲ್ಲಾ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಎಲ್ಲಾ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ ಅಧೀಕ್ಷಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ. |

**ಜಿಲ್ಲಾ ಮಟ್ಟದಲ್ಲಿ**

| ಕ್ರ. ಸಂ. | ಇಲಾಖೆಯ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(1)ರ ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(2)ರ ಪ್ರಕಾರ ಸಹಾಯಕ ಸಾರ್ವಜನಿಕ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 19(1)ರ ಪ್ರಕಾರ ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1. | ಸಮಾಜ ಕಲ್ಯಾಣ ಇಲಾಖೆ | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಕಛೇರಿ ಅಧೀಕ್ಷಕರು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬೆಂಗಳೂರು ಗ್ರಾಮಾಂತರ ಜಿಲ್ಲೆ. |

**(1) ಜಿಲ್ಲಾ ಘಟಕ ಸಂರಚನೆ ಪ್ರಕಾರ್ಯಗಳು ಮತ್ತು ಕರ್ತವ್ಯದ ವಿವರಗಳು:**

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಸಮಾಜ ಕಲ್ಯಾಣ ಇಲಾಖೆಯ ಜಿಲ್ಲಾ ಆಡಳಿತ ವ್ಯವಸ್ಥೆಯ ಮುಖ್ಯಸ್ಥರಾಗಿದ್ದು ಇವರ ಅಧೀನದಲ್ಲಿ 8 ತಾಲ್ಲೂಕುಗಳಾದ ರಾಮನಗರ, ಚನ್ನಪಟ್ಟಣ, ಮಾಗಡಿ, ದೇವನಹಳ್ಳಿ, ನೆಲಮಂಗಲ, ಮಾಗಡಿ, ಕನಕಪುರ ಹಾಗೂ ದೊಡ್ಡಬಳ್ಳಾಪುರ ತಾಲ್ಲೂಕುಗಳ ಆಡಳಿತ ವ್ಯವಸ್ಥೆಯ ಮುಖ್ಯಸ್ಥರಾಗಿರುವ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಮತ್ತು ಪ್ರಾಂಶುಪಾಲರು, ಶ್ರೀ ಮೊರಾರ್ಜಿ ದೇಸಾಯಿ ವಸತಿ ಶಾಲೆ, ಕನಕಪುರ ಹಾಗೂ ನವೋದಯ ಮಾದರಿ ವಸತಿ ಶಾಲೆ, ಮಂದಾರಗುಪ್ಪೆ, ಚನ್ನಪಟ್ಟಣ ತಾಲ್ಲೂಕು ಇವರು ಕಾರ್ಯ ನಿರ್ವಹಿಸುತ್ತಿರುತ್ತಾರೆ.

(2) ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಸಮಾಜ ಕಲ್ಯಾಣ ಇಲಾಖೆಯ ಎಲ್ಲಾ ಕಾರ್ಯಕ್ರಮಗಳನ್ನು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಸಮನ್ವಯದೊಂದಿಗೆ ಅನುಷ್ಠಾನಗೊಳಿಸಬೇಕಾಗಿರುತ್ತದೆ. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ರವರು ಸಮಾಜ ಕಲ್ಯಾಣ ಇಲಾಖೆಯ ಜಿಲ್ಲಾ ಆಡಳಿತಾಧಿಕಾರಿಗಳಾಗಿ ಸಹ ಕಾರ್ಯ ನಿರ್ವಹಿಸುತ್ತಿರುತ್ತಾರೆ. ಕಾರ್ಯಕ್ರಮಗಳನ್ನು ಜಿಲ್ಲಾಧಿಕಾರಿಗಳು ಮತ್ತು ಮುಖ್ಯ ಕಾರ್ಯ ನಿರ್ವಾಹಕಾಧಿಕಾರಿಗಳು ಜಿಲ್ಲಾ ಪಂಚಾಯತ್ ರವರ ಮಾರ್ಗದರ್ಶನದಲ್ಲಿ ಅನುಷ್ಠಾನಗೊಳಿಸಲಾಗುತ್ತದೆ.

ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಅಧಿಕಾರಿಗಳ ಅಧೀನದಡಿಯಲ್ಲಿ ಬರುವ ಸಂಸ್ಥೆಗಳ ವಿವರ ಮತ್ತು ಕಾರ್ಯಕ್ರಮಗಳ ವಿವರ ಕೆಳಕಂಡಂತಿದೆ.

**ಎ) ಸಂಸ್ಥೆಗಳ ವಿವರ:**

1) 57 ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕ/ ಬಾಲಕಿಯರ ವಿದ್ಯಾರ್ಥಿ ನಿಲಯ (5 ರಿಂದ 10ನೇ ತರಗತಿಯವರೆಗೆ) (ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವಿದ್ಯಾರ್ಥಿಗಳಿಗೆ)
2) 8 ಸರ್ಕಾರಿ ಕಾಲೇಜು ವಿದ್ಯಾರ್ಥಿನಿಲಯಗಳು, (ಪಿ.ಯು.ಸಿ., ಪದವಿ, ವೈದ್ಯಕೀಯ, ಇಂಜಿನಿಯರಿಂಗ್, ಕಾನೂನು, ಪಾಲಿಟೆಕ್ನಿಕ್, ಡಿ.ಎಡ್., ಬಿ.ಎಡ್., ವಿದ್ಯಾರ್ಥಿಗಳಿಗೆ) (ಪರಿಸಿಷ್ಟ ಜಾತಿ/ ಪಂಗಡದ ವಿದ್ಯಾರ್ಥಿಗಳಿಗೆ).
3) ಮಹಿಳಾ ಕಲ್ಯಾಣ ಕೇಂದ್ರಗಳು (3 ವರ್ಷ 10 ತಿಂಗಳಿಂದ 5 ವರ್ಷ 19 ತಿಂಗಳ ಮಕ್ಕಳಿಗೆ) (ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಮಕ್ಕಳಿಗೆ)
4) ಒಂದು ಹೊಲಿಗೆ ತರಬೇತಿ ಕೇಂದ್ರ (ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ಮಹಿಳೆಯವರಿಗೆ 1 ವರ್ಷದ ತರಬೇತಿ).
5) ಒಂದು ಮೊರಾರ್ಜಿ ದೇಸಾಯಿ ವಸತಿ ಶಾಲೆ ಮತ್ತು ಒಂದು ನವೋದಯ ಮಾದರಿ ವಸತಿ ಶಾಲೆ (ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗ ಮತ್ತು ಹಿಂದುಳಿದ ವಿದ್ಯಾರ್ಥಿಗಳಿಗೆ)
6) 2 ವಸತಿ ಶಾಲೆ ಹಾಗೂ 6 ಆಶ್ರಮ ಶಾಲೆಗಳು.

**ಬಿ)** ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಜಿಲ್ಲಾ ವಲಯದಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಸರ್ವತೋಮುಖ ಅಭಿವೃದ್ದಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಸರ್ಕಾರದ ವಿವಿಧ ಇಲಾಖೆ, ನಿಗಮ, ಮಂಡಳಿ ಹಾಗೂ ಇನ್ನಿತರ ಸಂಸ್ಥೆಗಳಿಗೆ ಮೀಸಲಾತಿಯಡಿಯಲ್ಲಿ ನೇಮಕವಾದ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದವರಿಗೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಿಂಧುತ್ವ ಪ್ರಮಾಣ ಪತ್ರ ನೀಡುವುದು.
2) ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಕ್ಕೆ ಸೇರಿದ್ದೇವೆಂದು ಸುಳ್ಳು ಮಾಹಿತಿ ನೀಡಿ ಪಡೆದ ಜಾತಿ ಪ್ರಮಾಣ ಪತ್ರದ ದೂರನ್ನು ಕುರಿತು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಾತಿ ಪರಿಶೀಲನಾ ಸಮಿತಿಯು ವಿಚಾರಣೆ ಮಾಡಿ ಕ್ರಮಕೈಗೊಳ್ಳುವುದು.
3) ಕಾನೂನು ಪದವಿಯಲ್ಲಿ ತೇರ್ಗಡೆಯಾದ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಪದವಿಧರರಿಗೆ ನ್ಯಾಯಾಧಿಕರಣ ಆಡಳಿತದಲ್ಲಿ ತರಬೇತಿಗಾಗಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ಇದರ ಅಧ್ಯಕ್ಷತೆಯಲ್ಲಿ ಪದವೀಧರರನ್ನು ಆಯ್ಕೆ ಮಾಡುವುದು.
4) ದೌರ್ಜನ್ಯಕ್ಕೆ ಒಳಪಟ್ಟ ಪರಿಶಿಷ್ಟ ಜಾತಿಯವರಿಗೆ ಜಿಲ್ಲಾಧಿಕಾರಿಗಳ ಆದೇಶ ಪಡೆದು ಪರಿಹಾರವನ್ನು ತಹಶೀಲ್ದಾರ್ ಮೂಲಕ ನೀಡುವುದು.
5) ಸರ್ಕಾರದ ಆದೇಶ ಪಡೆದು ಖಾಸಗಿ ವಿದ್ಯಾರ್ಥಿ ನಿಲಯಗಳನ್ನು ನಡೆಸುತ್ತಿರುವ ಸ್ವಯಂ ಸೇವಾ ಸಂಸ್ಥೆಗಳಿಗೆ ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿಗಳು ಆದೇಶ ಪಡೆದು ಸಹಾಯಧನ ನೀಡುವುದು.
6) ವೈದ್ಯಕೀಯ ಮತ್ತು ತಾಂತ್ರಿಕ ಕಾಲೇಜುಗಳಲ್ಲಿ ವ್ಯಾಸಂಗ ಮಾಡುವ ಪರಿಶಿಷ್ಟ ಜಾತಿ/ ವರ್ಗದ ವಿದ್ಯಾರ್ಥಿಗಳಿಗೆ ಬುಕ್ ಬ್ಯಾಂಕ್ ಕಲ್ಪಿಸುವುದು.
7) ಪ್ರಥಮ ಬಿ.ಇ. ಮತ್ತು ಪ್ರಥಮ ಡಿಪ್ಲೊಮಾ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಸಾಧನ ಸಲಕರಣೆಗಳಾದ ಸೈಂಟಿಫಿಕ್ ಕ್ಯಾಲುಕುಲೇಟರ್, ಡ್ರಾಯಿಂಗ್ ಬೋರ್ಡ್ ಮತ್ತು ಮಿನಿ ಡ್ರಾಪ್ಟರ್ ಒದಗಿಸುವುದು.
8) ಎರಡನೆಯ ಪಿ.ಯು.ಸಿ. ಪದವಿ, ಇಂಜಿನಿಯರಿಂಗ್ ಪದವಿಗಳಲ್ಲಿ ಅಂತಿಮ ವರ್ಷದಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಪುರಸ್ಕಾರ ಹಣ ನೀಡಲಾಗುವುದು.
9) ನಿರುದ್ಯೋಗಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಯುವಕ/ ಯುವತಿಯರಿಗೆ ಸ್ವಯಂ ಉದ್ಯೋಗ ಮಾಡಲು ಆಟೋ/ ಮೋಟಾರು ಕಾರು ವಾಹನ ಚಾಲನೆ ತರಬೇತಿ ನೀಡಿ ಪರವಾನಗಿ ನೀಡುವುದು ಮತ್ತು ತರಬೇತಿಯವರಿಗೆ ತರಬೇತಿಯ ಅವಧಿಯಲ್ಲಿ ಶಿಷ್ಯವೇತನವನ್ನು ನೀಡುವುದು.
10) ವಿಶೇಷ ಘಟಕ ಯೋಜನೆಯಡಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಗಿರಿಜನ ಉಪಯೋಜನೆಯಡಿ ಪರಿಶಿಷ್ಟ ವರ್ಗದ ಬಡ ಕುಟುಂಬದವರಿಗೆ ಹೈನುಗಾರಿಕೆ ಕಾರ್ಯಕ್ರಮಕ್ಕಾಗಿ ಸಹಾಯಧನವನ್ನು ನೀಡುವುದು, ಮತ್ತು ವಿದ್ಯಾವಂತ ನಿರುದ್ಯೋಗಿ ಯುವಕ/ ಯುವತಿಯರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ವಿವಿಧ ವೃತ್ತಿಪರ ಕೋರ್ಸುಗಳಲ್ಲಿ ತರಬೇತಿ ನೀಡುವುದು.
11) ತಾಲ್ಲೂಕುಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಶೀಲನೆ ಮಾಡುವುದು ಮತ್ತು ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಯಲ್ಲಿ ಜಿಲ್ಲಾ ನೋಡಲ್ ಅಧಿಕಾರಿಯಾಗಿ ಕಾರ್ಯನಿರ್ವಹಿಸುವುದು.

**ಸಿ)** ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ದಿಗಾಗಿ ಈ ಕೆಳಕಂಡ ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

1) ಹೊಲಿಗೆ ತರಬೇತಿ ಕೇಂದ್ರದಲ್ಲಿ ಉಚಿತ ತರಬೇತಿ ಪಡೆದು ಉತ್ತೀರ್ಣರಾದವರಿಗೆ ಉಚಿತ ಹೊಲಿಗೆ ಯಂತ್ರಗಳ ಸರಬರಾಜು.
2) ಆಡಳಿತ ನ್ಯಾಯಾಧಿಕರಣದಲ್ಲಿ ತರಬೇತಿ ಪಡೆಯುವ ಪರಿಶಿಷ್ಟ ಜಾತಿ/ ವರ್ಗದ ಕಾನೂನು ಪದವಿಧರರಿಗೆ ಮಾಸಿಕ 1000/- ಶಿಷ್ಯವೇತನ ನೀಡುವುದು.
3) ಕಾನೂನು ಪದವಿ ಪಡೆದವರಿಗೆ ಪುಸ್ತಕ ಖರೀದಿಸಲು ಮತ್ತು ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಲು ರೂ.5000/- ಗಳ ಧನ ಸಹಾಯ ನೀಡುವುದು.
4) ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳ ನಿರ್ವಹಣೆ.
5) ಇಲಾಖೆಯ ಕಟ್ಟಡಗಳ ನಿರ್ವಹಣೆ ಮತ್ತು ದುರಸ್ತಿ.
6) ಮೆಟ್ರಿಕ್ ನಂತರದ ವಿವಿಧ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುವ ಪರಿಶಿಷ್ಟ ಜಾತಿ/ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ನೀಡುವುದು.
7) ಎಸ್.ಎಸ್.ಎಲ್.ಸಿ.ಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ರೂ.500/-ಗಳ ಪುರಸ್ಕಾರ ಹಣ ನೀಡುವುದು.
8) 1 ರಿಂದ 10ನೇ ತರಗತಿ ವ್ಯಾಸಂಗ ಮಾಡುವ ಪರಿಶಿಷ್ಟ ಜಾತಿ/ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ನೀಡುವುದು.
9) ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳ ನಿರ್ವಹಣೆ.
10) ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ನಿರ್ವಹಣೆ.
11) ಹೆಚ್ಚಿನ ಊಟ ಮತ್ತು ವಸತಿ ವೆಚ್ಚಗಳ ಸಹಾಯಧನ ನೀಡುವುದು.
12) ಅನೈರ್ಮಲ್ಯ ವೃತ್ತಿಯಲ್ಲಿ ತೊಡಗಿರುವವರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ ನೀಡುವುದು.

13) ಅಸ್ಪೃಷ್ಯತಾ ನಿವಾರಣೆ ಯೋಜನೆಯಲ್ಲಿ ಅಂತರ್ ಜಾತಿ ವಿವಾಹವಾದ ದಂಪತಿಗಳಿಗೆ ರೂ. 25,000/-ಗಳ ಧನ ಸಹಾಯ ನೀಡುವುದು. (ರೂ.12,500/- ನಗದು ಮತ್ತು ರೂ.12,500/- ರಾಷ್ಟ್ರೀಯ ಉಳಿತಾಯ ಪ್ರಮಾಣ ಪತ್ರ ನೀಡುವುದು.)
14) ಅಂಬೇಡ್ಕರ್ ವಸತಿ ಯೋಜನೆ.
15) ಆಶ್ರಯ ವಸತಿ ಯೋಜನೆ.
16) ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಡಿಯಲ್ಲಿ ಜಿಲ್ಲಾಧಿಕಾರಿಗಳ ಆದೇಶದನುಸಾರ ಪರಿಶಿಷ್ಟ ಜಾತಿ ಕಾಲೋನಿ/ ಗ್ರಾಮಕ್ಕೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು.
17) ವಿಶೇಷ ಘಟಕ ಮತ್ತು ಗಿರಿಜನ ಉಪಯೋಜನೆಗಳನ್ನು ಅನುಷ್ಠಾನಗೊಳಿಸುವುದು.
18) ಶೈಕ್ಷಣಿಕ ಪ್ರವಾಸ ಕಡ್ಡಾಯವಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಪ್ರವಾಸ ಪ್ರಯಾಣ ವೆಚ್ಚ ನೀಡುವುದು.
19) ವಸತಿ ಶಾಲೆಗಳ ಮತ್ತು ಆಶ್ರಮ ಶಾಲೆಗಳ ನಿರ್ವಹಣೆ.

**ಇ)** ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಈ ಕೆಳಕಂಡ ಸಮಿತಿಗಳ ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ.
1) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಹಿತರಕ್ಷಣೆ ಸಮಿತಿ.
2) ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳ ಕಾನೂನು ಪದವೀಧರರ ಆಡಳಿತ ನ್ಯಾಯಾಧಿಕರಣ ತರಬೇತಿ ಆಯ್ಕೆ ಸಮಿತಿ.
3) ಸಮಾಜ ಕಲ್ಯಾಣ ಇಲಾಖೆಯ ಗ್ರೂಪ್ 'ಡಿ' ನೌಕರರ ಆಯ್ಕೆ ಸಮಿತಿ.
4) ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳ ಸಿಂಧುತ್ವ ಪ್ರಮಾಣ ಪತ್ರ ನೀಡುವ ಸಮಿತಿ.
5) ಮೊರಾರ್ಜಿ ದೇಸಾಯಿ ವಸತಿ ಶಾಲೆಯ ಸಮಿತಿಯ ಸದಸ್ಯರಾಗಿರುತ್ತಾರೆ.

3) ಜಿಲ್ಲಾ ಘಟಕದ ಕಛೇರಿಯ ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯ ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯ ವಿಧಾನ:

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಲ್ಲಿ ಈ ಕೆಳಕಂಡ ಸಿಬ್ಬಂದಿವರ್ಗದವರು ಕಾರ್ಯನಿರ್ವಹಿಸುತ್ತಿರುತ್ತಾರೆ.

| | |
|---|---|
| 1. ಕಛೇರಿ ಅಧೀಕ್ಷಕರು | - 1 |
| 2. ತನಿಖಾ ಸಹಾಯಕರು | - 1 |
| 3. ವಿಶೇಷ ಘಟಕ ಯೋಜನಾ ಅಧೀಕ್ಷಕರು | - 1 |
| 4. ಪ್ರಥಮ ದರ್ಜೆ ಸಹಾಯಕರು | - 3 |
| 5. ದ್ವಿತೀಯ ದರ್ಜೆ ಸಹಾಯಕರು | - 2 |
| 6. ವಾಹನ ಚಾಲಕರು | - 1 |
| 7. ಗ್ರೂಪ್-ಡಿ ನೌಕರರು | - 2 |

ಸಾರ್ವಜನಿಕರಿಂದ ಅಧೀನ ಕಛೇರಿಗಳಿಂದ, ಮೇಲಾಧಿಕಾರಿಗಳಿಂದ ಹಾಗೂ ಸರ್ಕಾರದಿಂದ ಬರುವಂತಹ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಸಾರ್ವಜನಿಕರ ಮನವಿ ಬಗ್ಗೆ ಸ್ಥಳದಲ್ಲಿ ಸ್ವೀಕೃತಿ ಪತ್ರವನ್ನು ನೀಡಿದ ನಂತರ ಕಛೇರಿ ಅಧೀಕ್ಷಕರು, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಗಮನಕ್ಕೆ ತಂದು ಸ್ವೀಕೃತಿ ಶಾಖೆಯಲ್ಲಿ ದಾಖಲು ಮಾಡಿ ಸಂಬಂಧ ಪಟ್ಟ ವಿಷಯ ನಿರ್ವಾಹಕರಿಗೆ ನೀಡಿ ಅಗತ್ಯ ಕ್ರಮ ಕೈಗೊಳ್ಳಲು ಆದೇಶಿಸುತ್ತಾರೆ. ಈ ರೀತಿ ನೀಡಿದ ಪತ್ರಗಳನ್ನು ಶಾಖೆಯಲ್ಲಿ ದಾಖಲು ಮಾಡಿ ಕಡತದಲ್ಲಿ ಶಾಖಾವಾರು ಸಂಖ್ಯೆಯಲ್ಲಿ ಹಾಕಿ ಕ್ರಮಕೈಗೊಂಡು ತೀರ್ಮಾನ ತೆಗೆದುಕೊಳ್ಳಲಾಗುವುದು.

**ಜಿಲ್ಲಾ ಘಟಕದ ಅಧಿಕಾರಿಗಳ ಕರ್ತವ್ಯದ ವಿವರಗಳು:**

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಸಾರ್ವಜನಿಕ ಹಿತದೃಷ್ಟಿಯಿಂದ ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಅಧಿಕಾರವುಳ್ಳವರಾಗಿರುತ್ತಾರೆ.

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ನಿರ್ವಹಿಸುವ ಕರ್ತವ್ಯಗಳು:**

1) ಸಮಾಜ ಕಲ್ಯಾಣ ಇಲಾಖೆಯ ವಿಷಯಗಳಲ್ಲಿ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಕಾರ್ಯ ನಿರ್ವಾಹಕ ಸಹಾಯಕರಾಗಿ ಕಾರ್ಯ ನಿರ್ವಹಿಸುವುದು.
2) ಪರಿಶಿಷ್ಟ ಜಾತಿ/ ವರ್ಗದ ಜನಾಂಗದ ಅಭ್ಯುಧಯಕ್ಕೆ ವಿವಿಧ ಅಭಿವೃದ್ಧಿ ಇಲಾಖೆಗಳಲ್ಲಿ ಹಮ್ಮಿಕ್ಕೊಂಡಿರುವ ಕಾರ್ಯಕ್ರಮಗಳ ಸಂಪರ್ಕಾಧಿಕಾರಿಯಾಗಿ ಕೆಲಸ ನಿರ್ವಹಿಸುವುದು.
3) ಪರಿಶಿಷ್ಟ ಜಾತಿ/ ವರ್ಗಗಳ ಅಭ್ಯುದಯಕ್ಕೆ ರೂಪಿಸಲಾದ ಕಾರ್ಯಕ್ರಮಗಳ ಕ್ರಿಯಾ ಯೋಜನೆಗಳನ್ನು ತಯಾರಿಸಿ, ಕಾರ್ಯಕ್ರಮಗಳಿಗೆ ಅನುದಾನ ನಿಗದಿಪಡಿಸಲು ಸಮಾಜ ಕಲ್ಯಾಣ ಇಲಾಖಾ ನಿರ್ದೇಶನಾಲಯಕ್ಕೆ ಪ್ರಸ್ತಾವನೆ ಸಲ್ಲಿಸುವುದು.
4) ಜಿಲ್ಲೆಯಾದ್ಯಂತ ತಿಂಗಳಲ್ಲಿ 10 ರಾತ್ರಿ ತಂಗುವಿಕೆಯೊಂದಿಗೆ 15 ದಿನಗಳ ಪ್ರವಾಸ ಕೈಗೊಳ್ಳುವುದು.
5) ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಾರ್ಯ ನಿರ್ವಹಣೆಯ ಬಗ್ಗೆ ಮೇಲ್ವಿಚಾರಣೆ ಮಾಡುವುದು. ಹಾಗೂ ತಾಲ್ಲೂಕು ಮಟ್ಟದಲ್ಲಿ ಇಲಾಖಾ ಕಾರ್ಯಕ್ರಮಗಳ ಮೇಲ್ವಿಚಾರಣೆ ಮಾಡುವ ಕುರಿತು, ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಿಗೆ ಮಾರ್ಗದರ್ಶನ ನೀಡುವುದು.
6) ಪರಿಶಿಷ್ಟ ಜಾತಿ/ ಪಂಗಡಗಳ ಕೃಷಿ ಕಾಲೋನಿಗಳಿಗೆ ಭೇಟಿ ನೀಡಿ ಅಲ್ಲಿನ ಅಭಿವೃದ್ಧಿ ಬಗ್ಗೆ ಸಮೀಕ್ಷೆ ನಡೆಸುವುದು ಹಾಗೂ ಸದರಿ ಕಾಲೋನಿಗಳಿಗೆ ಹಂಚಲಾದ ಜಮೀನುಗಳು, ಜಾನುವಾರುಗಳು ಹಾಗೂ ಕೃಷಿ ಉಪಕರಣಗಳು ದುರುಪಯೋಗ ಅಥವಾ ಮಾರಾಟ ಮಾಡದಂತೆ ನಿಗಾವಹಿಸುವುದು.
7) ಇಲಾಖಾ ವತಿಯಿಂದ ನಡೆಸಲ್ಪಡುತ್ತಿರುವ ವಿವಿಧ ಸಂಸ್ಥೆಗಳನ್ನು ಹೊಂದಿರುವ ಸಂಖ್ಯೆಯ ಕನಿಷ್ಠ ಅರ್ಧದಷ್ಟು ಸಂಸ್ಥೆಗಳಿಗೆ ಭೇಟಿ, ತಪಾಸಣೆ ನಡೆಸಿ ಮಾಸಿಕ ತಪಾಸಣಾ ವರದಿಯನ್ವಯ ಕೈಗೊಂಡ ಕ್ರಮಗಳ ಬಗ್ಗೆ ಪರಾಂಬರಿಸುವುದು.
8) ಪರಿಶಿಷ್ಟ ಜಾತಿ/ ವರ್ಗಗಳಿಗೆ ಮೀಸಲಾತಿ ಕಲ್ಪಿಸಿರುವ ಬಗ್ಗೆ ಮಾನ್ಯ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ವಿವಿಧ ಸಂಘ ಸಂಸ್ಥೆಗಳಿಗೆ ಕೈಗೊಳ್ಳಲಾದ ತಪಾಸಣೆಗಳಿಗೆ ಸಂಘ ಸಂಸ್ಥೆಗಳು ಕೈಗೊಂಡ ಕ್ರಮಗಳನ್ನು ಪರಿಶೀಲಿಸುವುದು.
9) ಜಿಲ್ಲೆಯಲ್ಲಿರುವ ಇಲಾಖೆಯ ಎಲ್ಲಾ ಸಂಸ್ಥೆಗಳ ಮೇಲ್ವಿಚಾರಣೆ ನಡೆಸುವುದು.

10) ಪರಿಶಿಷ್ಟ ಜಾತಿ/ ವರ್ಗಗಳಿಗೆ ಸಂಬಂಧಿಸಿದ ಅಂಕಿ ಅಂಶಗಳನ್ನು ಸಂಗ್ರಹಿಸುವುದು ಮತ್ತು ನಿರ್ವಹಿಸುವುದು.
11) ಜಿಲ್ಲಾ ಪಂಚಾಯತ್, ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿ ನಡೆಸಲ್ಪಡುವ ಸಭೆಗಳಿಗೆ ಹಾಗೂ ಜಿಲ್ಲಾಧಿಕಾರಿಗಳು ನಡೆಸುವ ಸಭೆಗಳಿಗೆ ಹಾಜರಿರುವುದು.
12) ಪರಿಶಿಷ್ಟ ಜಾತಿ/ ವರ್ಗಗಳ ಕಲ್ಯಾಣಕ್ಕಾಗಿ ಹಮ್ಮಿಕೊಂಡಿರುವ ವಿವಿಧ ಕಾರ್ಯಯೋಜನೆಗಳ ಪ್ರಗತಿ ವರದಿಯ ಬಗ್ಗೆ ತಾಲ್ಲೂಕು ಪಂಚಾಯತ್‌ನೊಂದಿಗೆ ಸಮಾಲೋಚನೆ ನಡೆಸಿ, ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿರುವ ಬಗ್ಗೆ ಮೇಲ್ವಿಚಾರಣೆ ನಡೆಸಿ ಕಾರ್ಯಕ್ರಮಗಳ ಶೀಘ್ರ ಪ್ರಗತಿಗೆ ಮಾರ್ಗದರ್ಶನ ನೀಡುವುದು.
13) ಬಾಕಿ ಇರುವ ಎನ್.ಡಿ.ಸಿ. ಬಿಲ್ಲುಗಳನ್ನು ಚುಕ್ತಗೊಳಿಸುವುದು ಹಾಗೂ ಮಾಸಿಕ ವೆಚ್ಚಗಳ ಪಟ್ಟಿಗಳನ್ನು ಸಲ್ಲಿಸುವುದು.
14) ವಿವಿಧ ಯೋಜನೆಗಳಿಗೆ ನಿಗದಿಪಡಿಸಲಾದ ಅನುದಾನವು ಕಾರ್ಯಕ್ರಮಗಳಿಗೆ ಖರ್ಚಾಗಿರುವ ಬಗ್ಗೆ ಖಾತ್ರಿ ಪಡಿಸಿಕೊಳ್ಳುವುದು, ಹಾಗೂ ಖರ್ಚಾಗದೆ ಉಳಿಕೆಯಾದ ಅನುದಾನವನ್ನು ಮರುಪಾವತಿಸಲು ಕ್ರಮಕೈಗೊಳ್ಳುವುದು.
15) ಪರಿಶಿಷ್ಟ ಜಾತಿ/ ವರ್ಗದವರ ಸಹಕಾರ ಸಂಘಗಳ ರಚನೆಗೆ ಹಾಗೂ ನೊಂದಣಿಗೆ ಸಹಕರಿಸುವುದು.
16) ಕಂದಾಯ ಇಲಾಖೆಯಿಂದ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಜನರಿಗೆ ಮನೆ ಕಟ್ಟಲು ಹಾಗೂ ಕೃಷಿ ಕಾಲೋನಿಗಳನ್ನು ಸ್ಥಾಪಿಸಿ ಸದರಿ ಕಾಲೋನಿಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದವರಿಗೆ ಜಮೀನುಗಳನ್ನು ವಿತರಿಸಿರುವ ಬಗ್ಗೆ ಪರಿಶೀಲನೆ ನಡೆಸುವುದು.
17) ಪರಿಶಿಷ್ಟ ಜಾತಿ/ ವರ್ಗದ ವಿದ್ಯಾರ್ಥಿಗಳಿಗೆ ಶಿಕ್ಷಣ ಸೌಲಭ್ಯಗಳನ್ನು ಪಡೆಯುವಲ್ಲಿ ಹಾಗೂ ವಿದ್ಯಾರ್ಥಿ ನಿಲಯಗಳಲ್ಲಿ ಸ್ಥಳಾವಕಾಶ ಪಡೆಯಲು ಸಹಕರಿಸುವುದು.
18) ಸರ್ಕಾರಿ ಆದೇಶದಂತೆ ಆದ್ಯತೆ ಮೇಲೆ ಸರ್ಕಾರಿ ಪಾಳು ಭೂಮಿ (Waste Land) ಪಡೆಯುವಲ್ಲಿ ಪರಿಶಿಷ್ಟ ಜಾತಿ/ ವರ್ಗದ ಜನಾಂಗದವರಿಗೆ ಸಹಕರಿಸುವುದು.
19) ಸಮಾಜ ಕಲ್ಯಾಣ ಇಲಾಖಾ ವತಿಯಿಂದ ಬಿಡುಗಡೆಗೊಳಿಸುವ ಅನುದಾನದಿಂದ ನಡೆಸಲ್ಪಡುವ ಅನುದಾನಿತ ಸಂಸ್ಥೆಗಳ ಭೇಟಿ ಮತ್ತು ತಪಾಸಣೆ ನಡೆಸುವುದು.

**ವಿಶೇಷ ಘಟಕ ಯೋಜನೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳ್ಳುವಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ನಿರ್ವಹಿಸಬೇಕಾದ ಕರ್ತವ್ಯಗಳು:**

1) ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ರವರ ಸಹಯೋಗದೊಂದಿಗೆ ವಿಶೇಷ ಘಟಕ ಯೋಜನೆ ಸಂಬಂಧ ಕಾಲಕಾಲಕ್ಕೆ ಸಭೆಗಳನ್ನು ನಡೆಸಲು ಸಹಕರಿಸುವುದು.
2) ವಿವಿಧ ಅಭಿವೃದ್ಧಿ ಇಲಾಖೆಗಳು ಸಲ್ಲಿಸಿರುವ ಯೋಜನೆಗಳ ಪ್ರಸ್ತಾವನೆಗಳನ್ನು ಸಂಬಂಧಿಸಿದ ಇಲಾಖೆಗಳೊಂದಿಗೆ ಚರ್ಚಿಸಿ ಪರಿಶೀಲಿಸಿ ಪ್ರಸ್ತಾವನೆಗಳನ್ನು ಜಿಲ್ಲಾ ಪಂಚಾಯತ್‌ಗೆ ಕ್ರಮಕ್ಕಾಗಿ ಸಲ್ಲಿಸುವುದು.
3) ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳವರ ಅವಶ್ಯಕತೆ ಹಾಗೂ ಅಭಿರುಚಿಗೆ ತಕ್ಕಂತೆ ಹೊಸ ಆರ್ಥಿಕಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಸಲಹೆ ನೀಡುವುದು.
4) ವಿವಿಧ ಇಲಾಖೆಗಳಲ್ಲಿ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳ ಆರ್ಥಿಕ ಹಾಗೂ ಭೌತಿಕ ಪ್ರಗತಿ ವರದಿಯನ್ನು ಪಡೆದು ಕ್ರೋಢೀಕರಿಸಿದ ಪಟ್ಟಿಯನ್ನು ಪರಾಮರ್ಶಿಸಲು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ರವರಿಗೆ ಸಲ್ಲಿಸುವುದು.
5) ವಿಶೇಷ ಘಟಕ ಯೋಜನೆ ಅಡಿ ಹಿಂದಿನ ವರ್ಷ ನೀಡಲಾದ ಸವಲತ್ತುಗಳನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡಿರುವ ಬಗ್ಗೆ ಹಾಗೂ ಪ್ರಸಕ್ತ ಸಾಲಿನಲ್ಲಿ ಅನುಷ್ಠಾನಗೊಳ್ಳುತ್ತಿರುವ ಕಾರ್ಯಕ್ರಮಗಳ ಕುರಿತು ನಿಗಾ ಇಡುವುದು.
6) ವಿವಿಧ ಅಭಿವೃದ್ಧಿ ಇಲಾಖೆಗಳಿಂದ ಅನುಷ್ಠಾನಗೊಳ್ಳುವ ವಿಶೇಷ ಘಟಕ ಯೋಜನೆ ಕಾರ್ಯಕ್ರಮಗಳ ಸಂಯೋಜನೆಗೆ ಸಂಪರ್ಕಾಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು.
7) ಕಾಲಕಾಲಕ್ಕೆ ವಿವಿಧ ಇಲಾಖೆಗಳಿಗೆ ಅಗತ್ಯವೆನಿಸಿದಲ್ಲಿ ಖರೀದಿ ಸಮಿತಿ ರಚಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು.
8) ವಿಶೇಷ ಘಟಕ ಯೋಜನೆ ಅಡಿ ಆರ್ಥಿಕಾಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಅಗತ್ಯ ಸಾಲಸೌಲಭ್ಯ ಬಿಡುಗಡೆಗೊಳಿಸುವ ನಿಟ್ಟಿನಲ್ಲಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ಮತ್ತು ಪಿ.ಎಲ್.ಡಿ. ಬ್ಯಾಂಕ್ ಮತ್ತು ರಾಷ್ಟ್ರೀಕೃತ ಬ್ಯಾಂಕ್‌ಗಳೊಂದಿಗೆ ಸತತ ಸಂಪರ್ಕದಲ್ಲಿರುವುದು.
9) ವಿವಿಧ ಅಭಿವೃದ್ಧಿ ಇಲಾಖೆಗಳಿಂದ ಅನುಷ್ಠಾನಗೊಂಡಿರುವ ಕಾರ್ಯಕ್ರಮಗಳ ಬಗ್ಗೆ ಕಾಲಕಾಲಕ್ಕೆ ಯುಟಿಲೈಸೇಷನ್ ಸರ್ಟಿಫಿಕೇಟ್ ಬಂದಿರುವ ಬಗ್ಗೆ ಖಚಿತ ಪಡಿಸಿಕೊಂಡು ವಿಳಂಬವಾದ ಸಂದರ್ಭದಲ್ಲಿ ವಿಷಯದ ಬಗ್ಗೆ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್‌ರವರ ಗಮನಕ್ಕೆ ತರುವುದು.
10) ಫಲಾನುಭವಿಗಳ ಆಯ್ಕೆಯಲ್ಲಿ ಹಾಗೂ ಕಾರ್ಯಕ್ರಮಗಳ ಸಮರ್ಪಕ ಹಾಗೂ ಶೀಘ್ರ ಅನುಷ್ಠಾನಗೊಳ್ಳುವಲ್ಲಿ, ಬ್ಲಾಕ್ ಮಟ್ಟದ ಸಭೆಗಳನ್ನು ಸಂಯೋಜಿಸಲು ಸಹಕರಿಸುವುದು.
11) ವಿವಿಧ ಅಭಿವೃದ್ಧಿ ಇಲಾಖೆಗಳ ಅಧಿಕಾರಿಗಳ ಬ್ಲಾಕ್ ಮಟ್ಟದ ಸಭೆಯನ್ನು ಏರ್ಪಡಿಸಲು ಸೂಕ್ತ ಕ್ರಮ ತೆಗೆದುಕೊಂಡು, ವಿಶೇಷ ಘಟಕ ಯೋಜನೆಗಳ ಕಾರ್ಯಕ್ರಮಗಳು ವಿವಿಧ ಇಲಾಖೆಗಳ ಸಂಯೋಜನೆಯಲ್ಲಿ ಅನುಷ್ಠಾನಗೊಳ್ಳುತ್ತಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು.
12) ಯೋಜನಾಧಿಕಾರಿ, ಜಿಲ್ಲಾ ಸಾಂಖ್ಯಿಕ ಅಧಿಕಾರಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿರವರನ್ನೊಳಗೊಂಡ ಸದಸ್ಯ ಸಮಿತಿಯು ಜಿಲ್ಲೆಯಲ್ಲಿ ಅನುಷ್ಠಾನಗೊಂಡಿರುವ ವಿಶೇಷ ಘಟಕ ಯೋಜನೆ ಕಾರ್ಯಕ್ರಮಗಳಿಂದ ಆರ್ಥಿಕಾಭಿವೃದ್ಧಿ ಹೊಂದಿದ ಪ್ರಭಾವವನ್ನು ಅಭ್ಯಸಿಸುವುದು.
13) ಫಲಾನುಭವಿಗಳಿಗೆ ನೀಡಲಾದ ಸೌಲಭ್ಯ ಸೌಲಭ್ಯದಿಂದ ಉತ್ಪತ್ತಿಯಾಗುತ್ತಿರುವ ಆದಾಯ, ಸೌಲಭ್ಯ ಪಡೆದ ಫಲಾನುಭವಿ ಹಾಗೂ ಅವರ ಕುಟುಂಬದ ವಿವರಗಳಿರುವ ಅವಶ್ಯಕ ವಹಿ ಮತ್ತು ದಾಖಲೆಗಳನ್ನು ನಿರ್ವಹಿಸುವುದು ಮತ್ತು ಅನುಷ್ಠಾನ ಪ್ರಾಧಿಕಾರದ ಕೋರಿಕೆ ಮೇರೆಗೆ ರಾಜ್ಯ ಹಾಗೂ ಕೇಂದ್ರ ಸರ್ಕಾರಕ್ಕೆ ಸಲ್ಲಿಸುವುದು.
14) ಮೇಲೆ ತಿಳಿಸಿದಂತೆ ದಾಖಲೆಗಳನ್ನು ಬ್ಲಾಕ್ ಮಟ್ಟದಲ್ಲಿ ನಿರ್ವಹಿಸುವ ಬಗ್ಗೆ ಕ್ರಮ ಕೈಗೊಳ್ಳುವುದು.
15) ಯೋಜನಾ ಇಲಾಖೆಯು ನಡೆಸುವ "ಬೆಂಚ್ ಮಾರ್ಕ್ ಸರ್ವೆ" ಗೆ ಸಹಕರಿಸುವುದು.

16) ಗುಂಪು ಗ್ರಾಮಗಳಲ್ಲಿರುವ ಪರಿಶಿಷ್ಟ ಜಾತಿ ಫಲಾನುಭವಿಗಳ ಹಾಗೂ ಆರ್ಥಿಕ ಸವಲತ್ತು ನೀಡಿದ ನಂತರ ಪ್ರತಿ ಕುಟುಂಬಗಳು ಅಭಿವೃದ್ಧಿ ಹೊಂದಿದ ಬಗ್ಗೆ ಮಾಹಿತಿಯನ್ನು ಸಂಗ್ರಹಿಸುವುದು.
17) ಪ್ರತಿ ತಿಂಗಳು ವಿಶೇಷ ಘಟಕ ಯೋಜನೆ ಕಾರ್ಯಕ್ರಮದ ಪ್ರಗತಿಯ ಬಗ್ಗೆ ಪ್ರತ್ಯೇಕ ಟಿಪ್ಪಣಿಯನ್ನು ತಪಾಸಣಾ ವರದಿಯನ್ನು ತಿಂಗಳ ಪ್ರವಾಸ ದಿನಚರಿಯೊಂದಿಗೆ ಸಲ್ಲಿಸುವುದು.
18) ನಗರ ಸಭೆ, ಪುರ ಸಭೆಯ ಶೇ.18% ಆಯವ್ಯಯದ ವೆಚ್ಚವನ್ನು ತಪಾಸಣೆ ಮಾಡುವುದು.
19) ಶಾಲಾ ಕಾಲೇಜಿನಲ್ಲಿ ಇತರೆ ಸರ್ಕಾರಿ ಸಂಸ್ಥೆಗಳಲ್ಲಿ ದಾಖಲಾತಿ/ ನೇಮಕಾತಿ ಸಮಯದಲ್ಲಿ ಮೀಸಲಾತಿಯನ್ನು ಅನುಸರಿಸುತ್ತಿರುವ ಬಗ್ಗೆ ತಪಾಸಣೆ ನಡೆಸುವುದು.
20) ದೌರ್ಜನ್ಯ ನಡೆದ ಸ್ಥಳಗಳಿಗೆ ಭೇಟಿ ಕೊಟ್ಟು ಸಂತ್ರಸ್ಥರಿಗೆ ಕಾನೂನು ನೆರವು, ರಕ್ಷಣೆ ಇತರೆ ಪರಿಹಾರ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುವುದು.
21) ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯ ವಾರ್ಷಿಕ ತಪಾಸಣೆ ನಡೆಸುವುದು.

**ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕರ್ತವ್ಯಗಳು (ಜಾಬ್ ಚಾರ್ಟ್)**

**ಮೂಲ ಕರ್ತವ್ಯಗಳು:**

1) ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ/ ವರ್ಗ ಕಲ್ಯಾಣದ ಸಂಪರ್ಕಾಧಿಕಾರಿಯಾಗಿ, ಅನುಷ್ಠಾನಾಧಿಕಾರಿಯಾಗಿ ಮತ್ತು ಕಾರ್ಯನಿರ್ವಾಹಕ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುವುದು.
2) ಪ್ರತಿ ತಿಂಗಳು ಕನಿಷ್ಠ 15 ದಿನಗಳಿಗೆ ಕಡಿಮೆ ಇಲ್ಲದಂತೆ 10 ರಾತ್ರಿ ತಂಗುವಿಕೆಗಳೊಂದಿಗೆ ವಿಶೇಷವಾಗಿ ಹರಿಜನ ಬಸ್ತಿಗಳಿಗೆ ಭೇಟಿ ನೀಡಿ ಪ್ರವಾಸ ಕೈಗೊಳ್ಳುವುದು.
3) ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ/ ವರ್ಗಗಳ ಕಲ್ಯಾಣಕ್ಕಾಗಿ ರೂಪಿಸಲಾದ ವಿವಿಧ ಕಾರ್ಯಕ್ರಮಗಳಿಗೆ ವಿಸ್ತಾರವಾದ ಕ್ರಿಯಾಯೋಜನೆ ತಯಾರಿಸಿ; ಅನುದಾನ ಬಿಡುಗಡೆಗೆ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸುವುದು.
4) ತಾಲ್ಲೂಕು ಮಟ್ಟದಲ್ಲಿನ ಇಲಾಖಾ ಸಂಸ್ಥೆಗಳ ಮೇಲ್ವಿಚಾರಣೆ ಹಾಗೂ ತಪಾಸಣೆಯೊಂದಿಗೆ ಕಛೇರಿ ಸಿಬ್ಬಂದಿಗಳ ಮೇಜು ತಪಾಸಣೆ ನಡೆಸುವುದು.
5) ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ ಹಾಗೂ ವಾರ್ಷಿಕ ಪ್ರಗತಿ ವರದಿಗಳನ್ನು ಸಲ್ಲಿಸುವುದು.
6) ಮಾಸಿಕ ಖರ್ಚು ತಃಖ್ತೆ ಹಾಗೂ ಚೆಕ್ ಅಕೌಂಟ್ಸ್ ತಃಖ್ತೆಗಳನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಕಳುಹಿಸುವುದು.
7) ಪರಿಶಿಷ್ಟ ಜಾತಿ/ ವರ್ಗಗಳ ಮಕ್ಕಳು ಶಾಲೆಗೆ ಹಾಜರಾಗುತ್ತಿರುವ ಬಗ್ಗೆ ಸಮೀಕ್ಷೆ ನಡೆಸುವುದು ಹಾಗೂ ತಾಲ್ಲೂಕಿನ ಮೂಲ ಅಂಕಿ ಅಂಶಗಳನ್ನು ಸಂಗ್ರಹಿಸಿ ನಿರ್ವಹಿಸುವುದು.

**ಶಿಕ್ಷಣ:**

8) ಪರಿಶಿಷ್ಟ ಜಾತಿ/ ವರ್ಗದ ವಿದ್ಯಾರ್ಥಿಗಳಿಗೆ ಪ್ರಿಮೆಟ್ರಿಕ್ ಮತ್ತು ಪೋಸ್ಟ್ ಮೆಟ್ರಿಕ್ ವಿದ್ಯಾರ್ಥಿ ವೇತನಗಳ ಮಂಜೂರಾತಿ ಹಾಗೂ ಲೆಕ್ಕಾಚಾರದ ಮತ್ತು ಬಟವಾಡೆ ವಹಿಗಳನ್ನು ನಿರ್ವಹಿಸುವುದು.
9) ತಾಲ್ಲೂಕು ಮಟ್ಟದ ಎಲ್ಲಾ ಇಲಾಖೆ ಸಂಸ್ಥೆಗಳ ನಿರ್ವಹಣೆ ಮತ್ತು ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ಅನುದಾನಿತ ವಿದ್ಯಾರ್ಥಿ ನಿಲಯದ ಮೇಲ್ವಿಚಾರಣೆ ನಡೆಸುವುದು.
10) ಪರಿಶಿಷ್ಟ ಜಾತಿ/ ವರ್ಗಗಳ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ.ಯಲ್ಲಿ ಪ್ರಥಮ ಬಾರಿಗೆ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದವರಿಗೆ ಬಹುಮಾನ ಹಣ ವಿತರಿಸುವುದು.
11) ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಶಾಲೆಗೆ ತೆರಳುವ ಮಕ್ಕಳಿಗೆ ಉಚಿತ ಸಮವಸ್ತ್ರ, ಪಠ್ಯಪುಸ್ತಕ ಹಾಗೂ ಇತರೆ ಶೈಕ್ಷಣಿಕ ಸೌಲಭ್ಯಗಳು ವಿತರಣೆಯಾಗುತ್ತಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳುವುದು.
12) ಹರಿಜನ ಬಸ್ತಿಗಳಲ್ಲಿ ವಯಸ್ಕರ ಶಿಕ್ಷಣ, ಯುವಜನ ಸೇವೆ ಹಾಗೂ ಸಹಕಾರ ಇಲಾಖೆಗಳ ಸಹಯೋಗದೊಂದಿಗೆ ಸಂಬಂಧಿಸಿದ ಸಂಸ್ಥೆಗಳನ್ನು ಪ್ರಾರಂಭಿಸಲು ಸಹಕಾರ ನೀಡುವುದು.
13) ಸಮರ್ಪಕವಾಗಿ ವಿದ್ಯಾರ್ಥಿ ವೇತನಗಳನ್ನು ವಿತರಿಸಿದ ಬಗ್ಗೆ ಹಾಗೂ ಬುಕ್ ಬ್ಯಾಂಕ್‌ಗಳನ್ನು ಸ್ಥಾಪಿಸಿರುವ ಬಗ್ಗೆ ಖಾತ್ರಿಪಡಿಸಿಕೊಳ್ಳುವುದು ಮತ್ತು ಮೇಲ್ವಿಚಾರಣೆ ನಡೆಸುವುದು.

**ಆರೋಗ್ಯ ಮತ್ತು ವಸತಿ:**

14) ಹಾಸ್ಟೆಲ್ ಕಟ್ಟಡಗಳು, ಸಮುದಾಯ ಭವನಗಳು, ಮಹಿಳಾ ಕಲ್ಯಾಣ ಕೇಂದ್ರಗಳು, ಶಾಲಾ ಕಟ್ಟಡಗಳ ನಿರ್ಮಾಣ ಕಾರ್ಯಗಳ ಮೇಲ್ವಿಚಾರಣೆ ನಡೆಸುವುದು.
15) ಹುಡ್ಕೋ ಎನ್.ಆರ್.ಇ.ಪಿ., ಆರ್.ಎಲ್.ಜಿ.ಪಿ., ಎಲ್.ಸಿ.ಹೆಚ್., ಕಾರ್ಯಕ್ರಮಗಳಡಿ ಅನುಷ್ಠಾನ ಇಲಾಖೆಗಳಿಂದ (ಗಿರಿಜನ ಉಪಯೋಜನೆ ಹೊರತುಪಡಿಸಿ) ಅನುಷ್ಠಾನಗೊಳ್ಳುತ್ತಿರುವ ಕಾರ್ಯಕ್ರಮಗಳಿಗೆ ಅರ್ಹ ಫಲಾನುಭವಿಗಳನ್ನು ಗುರ್ತಿಸಿ ಆಯ್ಕೆ ಮಾಡಿ ಶಿಫಾರಸ್ಸು ಮಾಡುವುದು.
16) ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದವರ ಮೇಲೆ ನಡೆಯುವ ದೌರ್ಜನ್ಯಗಳನ್ನು ತಡೆಗಟ್ಟಲು ಮತ್ತು ರಕ್ಷಣೆ ನೀಡಲು ನಾಗರೀಕ ಹಕ್ಕು ಜಾರಿ ವಿಭಾಗದ ಅಧಿಕಾರಿಗಳ/ ಸಿಬ್ಬಂದಿಗಳ ಸಹಯೋಗದೊಂದಿಗೆ ತಾಲ್ಲೂಕು ಮಟ್ಟದ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುವುದು.
17) ಬೆಂಕಿ ಆಕಸ್ಮಿಕ ಹಾಗೂ ಇತರೆ ನೈಸರ್ಗಿಕ ಅಪಘಾತಗಳಲ್ಲಿ ತುತ್ತಾದವರಿಗೆ ಆರ್ಥಿಕ ಪರಿಹಾರ ನೀಡಲು ಕ್ರಮ ಕೈಗೊಳ್ಳುವುದು.
18) ವಸತಿ ನಿವೇಶನ, ಸ್ಮಶಾನ, ಕಾಲೋನಿಗಳ ಸ್ಥಾಪನೆ ಮತ್ತು ವಿಸ್ತರಣೆ ಸಮಾಜ ಕಲ್ಯಾಣ ಇಲಾಖೆಯ ಸಂಸ್ಥೆಗಳ ಕಟ್ಟಡಗಳನ್ನು ನಿರ್ಮಿಸಲು ನಿಗದಿಪಡಿಸಲಾದ ಜಾಗಗಳಿಗೆ ಸಂಬಂಧಿಸಿದಂತೆ, ಭೂ ಸ್ವಾಧೀನ ಪಡಿಸಿಕೊಂಡಿರುವುದನ್ನು ಪಡೆಯುವುದು. ಭೂ ಸ್ವಾಧೀನ ಮಾಡಿದ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಂಡು, ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳ ಜನರ ವಸತಿ ನಿವೇಶನಗಳಿಗೆ ಹಂಚಿಕೆ ಮಾಡಿ

ಹಸ್ತಾಂತರಿಸುವುದು ಮತ್ತು ಕಂದಾಯ ಇಲಾಖಾವತಿಯಿಂದ ಸರ್ಕಾರಿ ಬಂಜರು ಭೂಮಿಯನ್ನು ಪಡೆದು, ವಸತಿ ನಿವೇಶನ ಅಭಿವೃದ್ಧಿಪಡಿಸಿ ಹಂಚಿಕೆ ಮಾಡುವುದು.

**ಆರ್ಥಿಕಾಭಿವೃದ್ಧಿ:**

19) ಕೃಷಿ ಕಾಲೋನಿಗಳನ್ನು ನಿರ್ವಹಿಸಲು ಪರಿಶಿಷ್ಟ ಜಾತಿ/ ವರ್ಗಗಳ ಜನರನ್ನು ಒಂದುಗೂಡಿಸಿ, ಸಮುದಾಯದ ಅಭಿವೃದ್ಧಿಗೆ ಕೃಷಿ, ಕೈಗಾರಿಕೆ, ಕಾರ್ಮಿಕ ಹಾಗೂ ಸೇವಾ ಸಹಕಾರ ಸಂಘಗಳನ್ನು ಸ್ಥಾಪಿಸಲು ಪ್ರೇರೇಪಿಸುವುದು.

20) ಸಾಮಾಜಿಕ-ಆರ್ಥಿಕ ಸಮೀಕ್ಷೆ ನಡೆಸಿ, SCP/IRDP/TSP/ಅಂತ್ಯೋದಯ/ TRYSEM/ ತಾಳಿಭಾಗ್ಯ/ IRDP/ Ganga Kalyana/ ಭಾಗ್ಯ ಜ್ಯೋತಿ ಮುಂತಾದ ಯೋಜನೆಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಕಲ್ಯಾಣಕ್ಕಾಗಿ ಅರ್ಹ ಫಲಾನುಭವಿಗಳನ್ನು ಗುರ್ತಿಸಿ, ಶಿಫಾರಸ್ಸು ಮಾಡುವುದು.

21) ಜೀತದಾಳುಗಳನ್ನು ಗುರುತಿಸಿ ವಿಮುಕ್ತಿಗೊಳಿಸಿ, ಪುನರ್‌ವಸತಿಗೆ ಕ್ರಮಕೈಗೊಳ್ಳುವುದು.

22) ಸ್ಥಳೀಯ ಸಂಸ್ಥೆಗಳಲ್ಲಿನ ಶೇ.18ರ ಅನುಧಾನದಲ್ಲಿ ವಿವಿಧ ಯೋಜನೆಗಳನ್ನು ಕಾರ್ಯಗತಗೊಳಿಸುವುದು, ಗ್ರಾಮ ಪಂಚಾಯ್ತಿಗಳಿಗೆ ಭೇಟಿ ನೀಡಿ ಶೇ.22.5ರಷ್ಟು ಆಯವ್ಯಯದ ವೆಚ್ಚವನ್ನು ಪರಿಶೀಲಿಸುವುದು.

23) ಅಂತರ್ ಜಾತಿ ವಿವಾಹವಾದ ದಂಪತಿಗಳಿಗೆ ಆರ್ಥಿಕ ಸಹಕಾರ ನೀಡಲು ಅಗತ್ಯ ದಾಖಲಾತಿಗಳನ್ನು ಸಿದ್ಧಪಡಿಸುವುದು.

24) ಹರಿಜನ ಬಸ್ತಿ ಹಾಗೂ ವಸತಿ ಪ್ರದೇಶಗಳಿಗೆ ಕುಡಿಯುವ ನೀರು ಸೌಕರ್ಯ ಹಾಗೂ ವಿದ್ಯುತ್ ಸರಬರಾಜು ಮಾಡಲು, ಸಮೀಕ್ಷೆ ನಡೆಸುವುದು.

25) ಪರಿಶಿಷ್ಟ ಜಾತಿ/ ಪಂಗಡಗಳಲ್ಲಿ ಅರ್ಹ ಇರುವವರನ್ನು ಗುರ್ತಿಸಿ, ವೃದ್ಧಾಪ್ಯ ವೇತನ, ವಿಧವಾ ವೇತನ ಅಂಕವಿಕಲ ವೇತನ ಹಾಗೂ ಇತರೆ ಆರ್ಥಿಕ ಸೌಲಭ್ಯಗಳನ್ನು ಮತ್ತು ಮಾರಣಾಂತಿಕ ಕಾಯಿಲೆಗಳಿಗೆ ಒಳಗಾದವರಿಗೆ, ಸಂಬಂಧಿಸಿದ ಪ್ರಾಧಿಕಾರವನ್ನು ಸಂಪರ್ಕಿಸಿ ಸೌಲಭ್ಯಗಳನ್ನು ಮತ್ತು ಪರಿಹಾರ ನೀಡಲು ಕ್ರಮ ಕೈಗೊಳ್ಳುವುದು.

26) ಪರಿಶಿಷ್ಟ ಜಾತಿ/ ವರ್ಗಗಳ ಅತಿಕ್ರಮಿಸಿಕೊಂಡು ಜಮೀನನ್ನು ಪುನರ್ ಮರಳಿಸಲು ಹಾಗೂ ಮರು ಹಂಚಿಕೆ ನೀಡಲು ಸಹಕರಿಸುವುದು.

27) ಪರಿಶಿಷ್ಟ ಜಾತಿ/ ವರ್ಗಗಳ ಜನಾಂಗದವರಿಗೆ ವಿವಿಧ ಸರ್ಕಾರಿ ಇಲಾಖೆಗಳಲ್ಲಿ ಅರೆ ಸರ್ಕಾರಿ, ಸಂಸ್ಥೆಗಳಲ್ಲಿ ಹಾಗೂ ಕೈಗಾರಿಕಾ ಸಮೂಹಗಳಲ್ಲಿ ಬ್ಯಾಂಕ್‌ಗಳನ್ನೊಳಗೊಂಡಂತೆ ಮೀಸಲಾತಿ ಕಲ್ಪಿಸಿರುವ ಬಗ್ಗೆ ಹಾಗೂ ಹುದ್ದೆಗಳನ್ನು ಭರ್ತಿ ಮಾಡಿರುವ ಬಗ್ಗೆ ಪರಿಶೀಲನೆ ನಡೆಸಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ರವರಿಗೆ ವರದಿ ನೀಡುವುದು.

28) ವಿವಿಧ ಸಂಸ್ಥೆಗಳಿಂದ ಉಲ್ಲೇಖಿಸದವರ ಜಾತಿ ಸಿಂಧುತ್ವವನ್ನು ಪರಿಶೀಲಿಸುವುದು.

29) ಪರಿಶಿಷ್ಟ ಜಾತಿ/ ವರ್ಗದ ಜನಾಂಗದವರಿಗೆ ಸಹಕಾರಿ ಸಂಘಗಳಲ್ಲಿ ಯುವಕ ಸಂಘ, ಮಹಿಳಾ ಮಂಡಳಿ ಹಾಗೂ ಭೂ ಅಭಿವೃದ್ಧಿ ಬ್ಯಾಂಕ್‌ಗಳಲ್ಲಿ ಸದಸ್ಯತ್ವ ಹೊಂದಲು ಪ್ರೇರೇಪಿಸಿ ಉತ್ತೇಜಿಸುವುದು.

30) ಜಿಲ್ಲಾ ಮತ್ತು ರಾಜ್ಯ ಮಟ್ಟ ಅಧಿಕಾರಿಗಳು (ಜಿಲ್ಲಾ ಪಂಚಾಯತ್ ಒಳಗೊಂಡಂತೆ) ಸೂಚಿಸುವ ಯಾವುದೇ ಕೆಲಸಗಳನ್ನು ನಿರ್ವಹಿಸುವುದು.

**4) ಕಛೇರಿ ಪ್ರಕಾರ್ಯಗಳ ನಿರ್ವಹಣೆಗೆ ರೂಪಿಸಿರುವ ಸೂತ್ರಗಳು:**

ಕಛೇರಿ ಕೈಪಿಡಿ ನಿಯಮಾವಳಿ ರೀತ್ಯಾ ಕಾಗದ ಪತ್ರಗಳನ್ನು ವಿಷಯ ನಿರ್ವಾಹಕರು ಸ್ವೀಕರಿಸಿ, ಸ್ವೀಕರಿಸಿದ ಎಲ್ಲಾ ಕಾಗದಗಳನ್ನು ವಿಷಯ ನಿರ್ವಾಹಕರ ದಿನಚರಿಯಲ್ಲಿ ನಮೂದಿಸಿಕೊಂಡು, ತದನಂತರ ವಿಷಯ ವಹಿಯಲ್ಲಿ ಅನುಕ್ರಮವಾಗಿ ನೊಂದಾಯಿಸಿಕೊಂಡು ಕಡತಗಳಲ್ಲಿ ಟಿಪ್ಪಣಿ ಹಾಕಿ ಮಂಡಿಸುತ್ತಾರೆ. ವಿಷಯ ನಿರ್ವಾಹಕರೆಲ್ಲರೂ ಕಛೇರಿ ಕಾರ್ಯವಿಧಾನದ ರೀತ್ಯಾ ಐದು ಕಟ್ಟು ವಿಧಾನ ಅಳವಡಿಸಿ ಕಾರ್ಯ ನಿರ್ವಹಿಸುತ್ತಾರೆ. ವಿಷಯ ನಿರ್ವಾಹಕರಿಂದ ಬಂದಂತಹ ಎಲ್ಲಾ ಕಡತಗಳ ಪರಿಶೀಲನೆ ಮಾಡಿ ಶಾಖೆಯ ಕಛೇರಿ ಅಧೀಕ್ಷಕರು ಎಲ್ಲಾ ಕಡತಗಳ ಪರಿಶೀಲನೆ ಮಾಡಿ ಸೂಕ್ತ ಅಭಿಪ್ರಾಯದೊಂದಿಗೆ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸುತ್ತಾರೆ.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ತಮಗೆ ಬರುವ ಕಡತಗಳಲ್ಲಿ ಅವರಿಗೆ ಯೋಜಿಸಿರುವ ಅಧಿಕಾರದನ್ವಯ ಕಡತಗಳಲ್ಲಿ ವಿಲೇವಾರಿ ಮಾಡುತ್ತಾರೆ. ಪ್ರಮುಖ ವಿಷಯಗಳು, ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಟಿಪ್ಪಣಿಯಲ್ಲಿ ಶಿಫಾರಸ್ಸು ಮಾಡಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸಲ್ಲಿಸುತ್ತಾರೆ ಮತ್ತು ಜಾತಿ ಸಿಂಧುತ್ವ ಪರಿಶೀಲನೆ ಮತ್ತು ದೌರ್ಜನ್ಯ ಪರಿಹಾರಗಳಿಗೆ ಸಂಬಂಧಿಸಿದ ಕಡತಗಳನ್ನು ಜಿಲ್ಲಾಧಿಕಾರಿಗಳಿಗೆ ಸಲ್ಲಿಸಲಾಗುವುದು. ಕಡತಗಳಲ್ಲಿ ತೀರ್ಮಾನ ಕೈಗೊಳ್ಳುವ ಬಗ್ಗೆ ಅನುಸರಿಸಿರುವ ಕಾರ್ಯ ವಿಧಾನ ಕಛೇರಿ ಕೈಪಿಡಿಯ ನಿಯಮಾವಳಿ ರೀತ್ಯಾ ಕ್ರಮ ವಹಿಸಲಾಗುತ್ತದೆ.

ಸಾರ್ವಜನಿಕರಿಂದ ಸ್ವೀಕರಿಸಲಾದ ಕಾಗದ ಪತ್ರಗಳಿಗೆ ಸ್ವೀಕೃತಿ ನೀಡಲಾಗುವುದು ಮತ್ತು ತಿಂಗಳ ಮೊದಲನೆ ಶನಿವಾರ ಹಾಗೂ ಮೂರನೇ ಶನಿವಾರ ಕುಂದು ಕೊರತೆಗಳ ಸಭೆಯಲ್ಲಿ ಹಾಜರಿದ್ದು ಕುಂದು ಕೊರತೆಗಳ ಅರ್ಜಿಗಳ ವಿಲೇವಾರಿಯನ್ನು ಜಿಲ್ಲಾಧಿಕಾರಿಗಳ ಮಾರ್ಗದರ್ಶನದಂತೆ ಮಾಡಲಾಗುತ್ತಿದೆ.

5) ಇಲಾಖೆಯ ನೌಕರರು ತಮ್ಮ ಕಾರ್ಯ ವ್ಯಾಪ್ತಿಯಲ್ಲಿ ಬರುವ ಕೆಲಸಗಳನ್ನು ನಿರ್ವಹಿಸಿರುವ ಇಲಾಖೆಯಿಂದ ನೀಡಲಾದ ನಿಯಮಗಳನ್ನು ಮಾರ್ಗಸೂಚಿಗಳನ್ನು, ಸೂಚನೆಗಳನ್ನು ಹಾಗೂ ಕಛೇರಿ ಕೈಪಿಡಿ, ಇಲಾಖೆ ಕೈಪಿಡಿಗಳನ್ನು ಪಾಲಿಸುತ್ತಾ ಕೆಲಸ ನಿರ್ವಹಿಸುತ್ತಿದ್ದಾರೆಯೇ.

ಈ ಕಛೇರಿ ಅಧೀನದಲ್ಲಿರುವ ನೌಕರರು ಕೆಲಸವನ್ನು ನಿರ್ವಹಿಸುವಾಗ ಇಲಾಖೆಯಿಂದ ಹೊರಡಿಸಲಾದ ನಿಯಮಗಳು, ನಿಯಮಾವಳಿಗಳು, ಸೂಚನೆಗಳು, ಮಾರ್ಗಸೂಚಿ ಹಾಗೂ ಕಛೇರಿ ಕೈಪಿಡಿ, ಇಲಾಖಾ ಕೈಪಿಡಿ ಮತ್ತು ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರದ ಆದೇಶಗಳನ್ನು ಪಾಲಿಸುತ್ತಾ ಇಲಾಖೆಯ ಕೆಲಸಕಾರ್ಯವನ್ನು ನಿರ್ವಹಿಸುತ್ತಿರುತ್ತಾರೆ.

**6) ಜಿಲ್ಲಾ ಘಟಕ ಹೊಂದಿರುವ ಅಥವಾ ಅದರ ನಿಯಂತ್ರಣದಲ್ಲಿರುವ ದಾಸ್ತಾವೇಜುಗಳ ಪ್ರವರ್ಗಗಳ ವಿವರ.**

ಈ ಕೆಳಕಂಡ ದಾಖಲಾತಿಗಳು ಲಭ್ಯವಿರುತ್ತದೆ.

1) ನಗದು ಪುಸ್ತಕ.
2) ನೌಕರರ ಸೇವಾ ವಹಿಗಳು.
3) ಸಂಸ್ಥೆಗಳ ಪಟ್ಟಿ.
4) ವಿದ್ಯಾರ್ಥಿ ನಿಲಯದಲ್ಲಿರುವ ವಿದ್ಯಾರ್ಥಿಗಳ ಪಟ್ಟಿ.
5) ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆಯಡಿಯಲ್ಲಿ ಆಯ್ಕೆಯಾಗಿರುವ ಫಲಾನುಭವಿಗಳ ಪಟ್ಟಿ.

6) ಅಂತರ್ ಜಾತಿ ವಿವಾಹವಾದ ದಂಪತಿಗಳ ಪಟ್ಟಿ.
7) ದೌರ್ಜನ್ಯ ಪ್ರಕರಣಗಳಲ್ಲಿ ನೊಂದ ಸಂತ್ರಸ್ಥರಿಗೆ ನೀಡಿರುವ ಪರಿಹಾರದ ಪಟ್ಟಿ.
8) ನ್ಯಾಯಾಧೀಕರಣ ಆಡಳಿತದಲ್ಲಿ ತರಬೇತಿಗಾಗಿ ಆಯ್ಕೆಯಾಗಿರುವ ಕಾನೂನು ಪದವೀಧರ ಅಭ್ಯರ್ಥಿಗಳ ಪಟ್ಟಿ.
9) ಯೋಜನೆ/ ಯೋಜನೇತರ ಇಲಾಖೆ ಕಾರ್ಯಕ್ರಮಗಳಿಗೆ ಖರ್ಚಾಗಿರುವ ಆರ್ಥಿಕ ಮತ್ತು ಭೌತಿಕ ವಿವರಗಳನ್ನೊಳಗೊಂಡಿರುವ ಪಟ್ಟಿ.
10) ಜಾತಿ ಸಿಂಧುತ್ವ ಪ್ರಮಾಣ ಪತ್ರಗಳ ನೀಡಿಕೆಯ ವಹಿ.
11) ಇಲಾಖಾ ಆಯವ್ಯಯ ಪಟ್ಟಿ.

7) ಅದರ ಕಾರ್ಯ ನೀತಿಯ ರಚನೆ ಅಥವಾ ಅದರ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಪ್ರಾತಿನಿಧ್ಯವಿರುವಂತೆ ಮಾಡಲು ಇರುವಂಥ ಯಾವುದೇ ವ್ಯವಸ್ಥೆಯ ವಿವರಗಳು:

ಬಡತನ ನಿರ್ಮೂಲನೆ ಕಾರ್ಯಕ್ರಮದಡಿಯಲ್ಲಿ ಫಲಾನುಭವಿಗಳನ್ನು ಗ್ರಾಮ ಸಭೆಗಳ ಮೂಲಕ ಆಯ್ಕೆ ಮಾಡಲಾಗುತ್ತದೆ. ನಂತರ ಆಯ್ಕೆಯಾದ ಪಟ್ಟಿಯನ್ನು ಸಂಬಂಧ ಪಟ್ಟ ತಾಲ್ಲೂಕು ಪಂಚಾಯ್ತಿಯಲ್ಲಿ ಜನ ಪ್ರತಿನಿಧಿಗಳನ್ನೊಳಗೊಂಡ ಸದಸ್ಯರ ಮೂಲಕ ಅನುಮೋದನೆ ಪಡೆದು ಅವರ ಸಹಕಾರದೊಂದಿಗೆ ಇಲಾಖೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

ಇತರೆ ಫಲಾನುಭವಿಗಳನ್ನು ಆಯ್ಕೆ ಸಮಿತಿಯ ಸದಸ್ಯರನ್ನು ತೊಡಗಿಸಿಕೊಂಡು ಅನುಷ್ಠಾನಗೊಳಿಸಲಾಗುತ್ತಿದೆ.

8) ಅದರ ಭಾಗವಾಗಿ ಅಥವಾ ಅದರ ಉದ್ದೇಶಕ್ಕಾಗಿ ರಚಿತವಾದ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳನ್ನೊಳಗೊಂಡ ಮಂಡಳಿಗಳು, ಪರಿಷತ್ತುಗಳು ಸಮಿತಿಯು ಅಥವಾ ಇತರ ವಿಚಾರಗಳ ಮತ್ತು ಆ ಮಂಡಳಿಗಳ ಪರಿಷತ್ತುಗಳ ಮತ್ತು ಇತರೆ ವಿಚಾರಗಳ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ದೊರೆಯುತ್ತವೆಯೇ ಎಂಬುದರ ಸಭೆಗಳು:

1) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿಗಾಗಿ ಸಮಾಜ ಕಲ್ಯಾಣ ಇಲಾಖೆ ಅಲ್ಲದೇ ಇತರೇ ಅಭಿವೃದ್ಧಿ ಕಾರ್ಯಗಳನ್ನು ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. ಇದರಲ್ಲಿ ಸಾರ್ವಜನಿಕರ ಪರವಾಗಿ ಅಧಿಕಾರೇತರ ಸದಸ್ಯರು ನೇಮಕಗೊಂಡಿರುತ್ತಾರೆ.
2) ಇಲಾಖಾ ಕಾರ್ಯಕ್ರಮಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸಲು ಜನ ಜಾಗೃತಿ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ.
3) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನರ ಕುಂದು ಕೊರತೆಗಳನ್ನು ವಿಚಾರಿಸುವುದಕ್ಕೋಸ್ಕರ 3 ತಿಂಗಳಿಗೊಮ್ಮೆ ಹಿತರಕ್ಷಣಾ ಸಮಿತಿ ಸಭೆಯನ್ನು ನಡೆಸಿ ಕ್ರಮಕೈಗೊಳ್ಳಲಾಗುತ್ತಿದೆ.
4) ಪ್ರತಿ ಮೊದಲನೆ ಶನಿವಾರ ಮತ್ತು ಮೂರನೆ ಶನಿವಾರ ಸಾರ್ವಜನಿಕ ಕುಂದು ಕೊರತೆಗಳನ್ನು ಮಾನ್ಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ವಿಚಾರಿಸಲಾಗುತ್ತಿದೆ.
5) ಸಭೆಯ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಾಗುತ್ತಿದೆ.

**9)** ಎಲ್ಲಾ ಯೋಜನೆಗಳ ವಿವರಗಳನ್ನು ಸೂಚಿಸಿ ಅದರ ಪ್ರತಿಯೊಂದು ಏಜೆನ್ಸಿಗೆ ಹಂಚಿಕೆ ಮಾಡಲಾದ ಆಯವ್ಯಯವನ್ನು ಪ್ರಸ್ತಾವಿತ ವೆಚ್ಚವನ್ನು ಮತ್ತು ಮಾಡಲಾದ ಬಟವಾಡೆಗಳ ಕುರಿತು ವರದಿಗಳನ್ನು ಯೋಜನೆ/ ಯೋಜನೇತರ ಆಯವ್ಯಯದಲ್ಲಿ ನಿಗದಿಪಡಿಸಿರುವ ಮತ್ತು ಬಿಡುಗಡೆಯಾಗಿರುವ ಕುರಿತು ಕಛೇರಿಯಲ್ಲಿ ಆಯವ್ಯಯ ವಹಿಯನ್ನು ನಿರ್ವಹಿಸಲಾಗಿದೆ. ಸಮಾಜ ಕಲ್ಯಾಣ ಇಲಾಖೆಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳಾದ ವಿದ್ಯಾರ್ಥಿ ನಿಲಯಗಳ ನಿರ್ವಹಣೆ, ವಿದ್ಯಾರ್ಥಿ ವೇತನ ಮಂಜೂರಾತಿ, ಪುರಸ್ಕಾರ ಹಣ ಇತರೆ ಕಾರ್ಯಕ್ರಮಗಳಿಗೆ ನೇರವಾಗಿ ಖರ್ಚು ಮಾಡಲಾಗುವುದು, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವರು.

**10)** ಹಂಚಿಕೆ ಮಾಡಲಾದ ಮೊಬಲಗನ್ನೊಳಗೊಂಡು ಸಹಾಯಧನ ಕಾರ್ಯಕ್ರಮಗಳ ಜಾರಿಯ ವಿಧಾನವನ್ನು ಮತ್ತು ಅಂತರ ಕಾರ್ಯಕ್ರಮಗಳ ಫಲಾನುಭವಿಗಳ ವಿವರಗಳನ್ನು ಸಹಾಯಧನ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಅನುಷ್ಠಾನಗೊಳಿಸುತ್ತಾರೆ. ವಿವರ ಕೆಳಕಂಡಂತಿದೆ.

1) ಅಂತರ್ ಜಾತಿಯ ವಿವಾಹವಾದ ದಂಪತಿಗಳಿಗೆ ರೂ.25,000/-ಗಳ ಸಹಾಯಧನ ನೀಡಲಾಗುವುದು (ರೂ.12,500/-ಗಳ ನಗದು ಮತ್ತು ರೂ. 12,500/- ರಾಷ್ಟ್ರೀಯ ಉಳಿತಾಯ ಪತ್ರ ನೀಡಲಾಗುವುದು)

1) ನೊಂದಣಿ ಕಛೇರಿಯಲ್ಲಿ ನೊಂದಾವಣೆ ಪ್ರಮಾಣ ಪತ್ರ.
2) ವರನ ವರಮಾನ ಪತ್ರ ಮತ್ತು ಜಾತಿ ಪತ್ರ.
3) ವಧುವಿನ ವರಮಾನ ಪತ್ರ ಮತ್ತು ಜಾತಿ ಪತ್ರ.
4) ದಂಪತಿಗಳ ಭಾವ ಚಿತ್ರ.
5) ದಂಪತಿಗಳ ವರಮಾನ 24,000/- ಮೀರಬಾರದು.
6) ವಧು ಅಥವಾ ವರ ಪರಿಶಿಷ್ಟ ಜಾತಿಯವರಾಗಿದ್ದು ಹಿಂದು ಸವರ್ಣಿಯರೊಂದಿಗೆ ವಿವಾಹವಾಗಿರಬೇಕು.

2) ಪರಿಶಿಷ್ಟ ಜಾತಿ ಕಾನೂನು ಪದವೀಧರರಾಗಿದ್ದು ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಲು ಮತ್ತು ಪುಸ್ತಕ ಖರೀದಿಸಲು ರೂ.5,000/- ಧನ ಸಹಾಯ ನೀಡಲಾಗುವುದು, ಧನ ಸಹಾಯಕ್ಕಾಗಿ

1) ಅರ್ಜಿ.
2) ಜಾತಿ ಪತ್ರ.
3) ವರಮಾನ ಪತ್ರ ನೀಡಬೇಕಾಗಿರುತ್ತೆ.

3) ವಿಶೇಷ ಘಟಕ ಯೋಜನೆಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹಾಲು ಕರೆಯುವ ಹಸು, ಎಮ್ಮೆ, ಕುರಿ, ಸ್ವಯಂ ಉದ್ಯೋಗ, ಗಳಿಗೆ ಧನ ಸಹಾಯವನ್ನು ನೀಡಲಾಗುವುದು ಈ ಕಾರ್ಯಕ್ರಮಗಳಿಗೆ ಶೇ.60:40ರ ಅನುಪಾತದಲ್ಲಿ ಸಹಾಯಧನ ಮತ್ತು ಬ್ಯಾಂಕ್‌ಗಳಿಂದ ಸಾಲ ರೂಪದಲ್ಲಿ, ಕೊಡುವ ಕಾರ್ಯಕ್ರಮಗಳನ್ನು ತಾಲ್ಲೂಕು ಮಟ್ಟಗಳಲ್ಲಿ ಅನುಷ್ಠಾನಗೊಳಿಸಲಾಗುವುದು. ಸದರಿ ಸಹಾಯ ಧನ ಪಡೆಯಲು ಜಾತಿ ಪತ್ರ, ವರಮಾನ ಪತ್ರ ಬಡತನ ರೇಖೆಗಿಂತ ಕೆಳಗೆ ಇರುವ ವಾರ್ಷಿಕ ವರಮಾನ ರೂ.12,000/-ಗಳ ಒಳಗಿರುವ ಕುಟುಂಬಗಳಿಗೆ ಧನ ಸಹಾಯವನ್ನು ತಾಲ್ಲೂಕು ಪಂಚಾಯತಿಯ ಪ್ರತಿನಿಧಿಗಳ ಸಭೆಯಲ್ಲಿ ಇಟ್ಟು ಅನುಮೋದನೆ ಪಡೆದು ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುವುದು.

4) ಗಿರಿಜನ ಉಪಯೋಜನೆಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹಾಲು ಕರೆಯುವ ಹಸು ಎಮ್ಮೆ ಕುರಿ ಸ್ವಯಂ ಉದ್ಯೋಗ ಕಲ್ಪಿಸಲು ಧನ ಸಹಾಯವನ್ನು ನೀಡಲಾಗುವುದು. ಈ ಕಾರ್ಯಕ್ರಮಕ್ಕೆ ಶೇ.75:25ರ ಅನುಪಾತದಲ್ಲಿ ಸಹಾಯಧನ ಮತ್ತು ಬ್ಯಾಂಕ್‌ಗಳಿಂದ ಸಾಲ ರೂಪದಲ್ಲಿ ಕೊಡುವ ಕಾರ್ಯಕ್ರಮಗಳನ್ನು ತಾಲ್ಲೂಕು ಮಟ್ಟದಲ್ಲಿ ಅನುಷ್ಠಾನಗೊಳಿಸಲಾಗುವುದು. ಸದರಿ ಸಹಾಯಧನ ಪಡೆಯಲು ಜಾತಿ ಪತ್ರ ವರಮಾನ ಪತ್ರ, ಬಡತನ ರೇಖೆಗಳಿಗಿಂತ ಕಡಿಮೆ ಇರುವ ವಾರ್ಷಿಕ ವರಮಾನ ರೂ.12,000/- ಒಳಗಿರುವ ಕುಟುಂಬಗಳಿಗೆ ಧನ ಸಹಾಯವನ್ನು ತಾಲ್ಲೂಕು ಪಂಚಾಯತಿಯಿಂದ ಪ್ರತಿನಿಧಿಗಳ ಸಭೆಯಲ್ಲಿ ಇಟ್ಟು ಅನುಮೋದನೆ ಪಡೆದು ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುವುದು.

11) ಅದು ಮಂಜೂರು ಮಾಡುವ ರಿಯಾಯಿತಿಗಳನ್ನು ಪರ್ಮಿಟ್‌ಗಳನ್ನು ಅಥವಾ ಆರ್ಥಿಕ ಅಧಿಕಾರ ಪತ್ರಗಳನ್ನು ಪಡೆಯುವವರ ವಿವರ.

ಈ ಕಛೇರಿಯಿಂದ ಯಾವುದೇ ಪರ್ಮಿಟ್‌ಗಳನ್ನು ನೀಡುವುದಿಲ್ಲ.

12) ಅದರ ಬಳಿ ಲಭ್ಯವಿರುವ ಅಥವಾ ಅದು ಹೊಂದಿರುವ ವಿದ್ಯುನ್ಮಾನ ರೂಪಕ್ಕಿಳಿಸಿರುವ ಮಾಹಿತಿಗೆ ಸಂಬಂಧಿಸಿದ ವಿವರ.

ವಿದ್ಯುನ್ಮಾನ ರೂಪಕ್ಕಿಳಿಸಿರುವ ಮಾಹಿತಿ ಇರುವುದಿಲ್ಲ.

13) ಸಾರ್ವಜನಿಕ ಉಪಯೋಗಕ್ಕಾಗಿ ಗ್ರಂಥಾಲಯವನ್ನು ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದಲ್ಲಿ ಅದರ ಕೆಲಸದ ಸಮಯವನ್ನೊಳಗೊಂಡಂತೆ ಮಾಹಿತಿ ಪಡೆಯಲು ಸಾರ್ವಜನಿಕರಿಗೆ ಲಭ್ಯವಿರುವ ಸೌಲಭ್ಯಗಳ ವಿವರ.

ಈ ಕಛೇರಿಯಲ್ಲಿ ಗ್ರಂಥಾಲಯ ಅಥವಾ ವಾಚನಾಲಯವಿರುವುದಿಲ್ಲ, ಆದರೆ ಕಛೇರಿಯ ವೇಳೆಯಲ್ಲಿ ಅಂದರೆ ಬೆಳಿಗ್ಗೆ 10.00 ರಿಂದ ಸಂಜೆ 5.30 ರವರೆಗೆ ಕೋರಿದ ಮಾಹಿತಿಯನ್ನು ಕಛೇರಿಯಲ್ಲಿ ಲಭ್ಯವಿರುವ ಮಾಹಿತಿಯನ್ನು ನೀಡಲಾಗುವುದು.

14) **ಸಾರ್ವಜನಿಕರಿಗೆ ಮಾಹಿತಿ ನೀಡುವ ಅಧಿಕಾರಿಗಳ ವಿವರ:**

ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ ಹೊರತುಪಡಿಸಿ ಎಲ್ಲಾ ರೀತಿಯ ಮಾಹಿತಿಯನ್ನು ಕಛೇರಿಯ ಅಧೀಕ್ಷಕರನ್ನು ಹಾಗೂ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಗೆ ಸಂಬಂಧಿಸಿದಂತೆ ವಿಶೇಷ ಘಟಕ ಯೋಜನಾ ಅಧೀಕ್ಷಕರುಗಳು ಮಾಹಿತಿ ನೀಡುವ ಸಿಬ್ಬಂದಿಗಳಾಗಿರುತ್ತಾರೆ.

15) ನಿರ್ದಿಷ್ಟಪಡಿಸಬಹುದಾದಂತಹ ಇತರ ಮಾಹಿತಿಯನ್ನು ಪ್ರಕಟಿಸತಕ್ಕದ್ದು ಮತ್ತು ಆ ತರುವಾಯ ಪ್ರತಿ ವರ್ಷ ಈ ಪ್ರಕಟಣೆಗಳನ್ನು ತಹಲ್‌ವರೆಗೆ ಪರಿಷ್ಕರಿಸತಕ್ಕದ್ದು.

ಪ್ರತಿ ವರ್ಷ ಪರಿಷ್ಕರಿಸಲಾಗುವುದು.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

ಪಿ.ಆರ್.1551

## ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕ ಮತ್ತು ಇತರ) ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು

**ಸಂಖ್ಯೆ: ಆರ್‌ಸಿಎಸ್/ ಎಲ್‌ಕ್ಯೂಡಿ/ 04/05-06, ದಿನಾಂಕ: 30ನೇ ಸೆಪ್ಟೆಂಬರ್, 2005**

**ವಿಷಯ :** ಗದಗ ಮತ್ತು ನವಲಗುಂದ ತಾಲ್ಲೂಕು ಪ್ರೋಗ್ರೆಸೀವ್ ಫಾರ್ಮರ್ಸ್ ಸಹಕಾರ ಸಂಘ, ನಿ., ಗದಗ, ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :**
1. ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ಪ್ರಾಂತ, ಇವರ ಪತ್ರ ಸಂಖ್ಯೆ: ಜೆಆರ್‌ಎಲ್/ಎ/ಸಿಆರ್/ 322/04-05, ದಿನಾಂಕ: 28.02.2005.
2. ಸಹಕಾರ ಸಂಘಗಳ ಉಪ ನಿಬಂಧಕರು, ಗದಗ, ಇವರ ಪತ್ರ ಸಂಖ್ಯೆ: ಡಿ.ಆರ್./ಬಿಡಿಜಿ/ ಸಮಾಪನೆ/ 58/ 04-05, ದಿನಾಂಕ:17.02.05.
3. ಈ ಕಛೇರಿಯ ಇದೇ ಕ್ರಮಾಂಕದ ನೋಟೀಸ್ ದಿನಾಂಕ: 02.04.2005.
4. ಸಹಕಾರ ಸಂಘಗಳ ಉಪ ನಿಬಂಧಕರು, ಗದಗ, ಇವರ ಪತ್ರ ಸಂಖ್ಯೆ: ಡಿ.ಆರ್/ ಜೆಡಿಜಿ/ ಸಮಾಪನೆ/ ಸಿಆರ್/ 58/ 04-05, ದಿನಾಂಕ: 19.07.2005.

**ಪ್ರಸ್ತಾವನೆ:**

ಗದಗ ಮತ್ತು ನವಲಗುಂದ ತಾಲ್ಲೂಕು ಪ್ರೋಗ್ರೆಸೀವ್ ಫಾರ್ಮರ್ಸ್ ಸಹಕಾರ ಸಂಘ, ನಿ. ಗದಗ, ಸಂಘವು ಸಂಖ್ಯೆ: 21: ದಿನಾಂಕ: 02.02.1959 ರಂತೆ ನೋಂದಣಿ ಆಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ಗದಗ ಜಿಲ್ಲೆಯ ಗದಗ ತಾಲ್ಲೂಕು ಧಾರವಾಡ ಜಿಲ್ಲೆಯ ನವಲಗುಂದ ತಾಲ್ಲೂಕಿಗೆ ಸೀಮಿತವಾಗಿರುತ್ತದೆ.

ಸಂಘವು ತನ್ನ ಮೂಲ ಉದ್ದೇಶಗಳನ್ವಯ ವ್ಯವಹರಿಸದೇ ಸ್ಥಗಿತಗೊಂಡಿರುತ್ತದೆ.

1) ಸದರಿ ಸಂಘವು 1959 ರಿಂದ ಕಾರ್ಯನಿರ್ವಹಿಸುತ್ತಿದ್ದರೂ ಕಳೆದ ಹಲವಾರು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ.
2) ವಾರ್ಷಿಕ ಮಹಾಸಭೆಗಳನ್ನು ಮತ್ತು ಕಾಲಕಾಲಕ್ಕೆ ಆಡಳಿತ ಸಮಿತಿ ಸಭೆಗಳನ್ನು ಜರುಗಿಸಿರುವುದಿಲ್ಲ. ಸಂಘದ ಆಡಳಿತ ಸಮಿತಿಗೆ ನಿಯಮಿತವಾಗಿ ಅಧ್ಯಕ್ಷರನ್ನು ಆಯ್ಕೆ ಮಾಡಿರುವುದಿಲ್ಲ.
3) ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 17/18ರ ಪ್ರಕಾರ ಸಂಘಕ್ಕೆ ಖಾಯಂ ಸಿಬ್ಬಂದಿ ನೇಮಕ ಮಾಡಿಕೊಂಡಿರುವುದಿಲ್ಲ.
4) ಸಂಘಕ್ಕೆ ಬರತಕ್ಕ ಮೆಂಬರ್ ಸಾಲ ರೂ.10425-85 ಇದ್ದು, ಅವಧಿ ಮೀರಿದ ಸಾಲವಾಗಿದ್ದು, ಈ ಸಾಲವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರ ಡಿ ಪಂಚಾಯತ್ ದಾವಾ ಕ್ರಮಕ್ಕೆ ಅಳವಡಿಸಿಲ್ಲ.
5) ಬಂಡವಾಳ ಶೇಖರಣೆ ಮಾಡಿರುವುದಿಲ್ಲ, ಇದರಿಂದಾಗಿ ಸಂಘದ ಆರ್ಥಿಕ ಸ್ಥಿತಿ ಚಿಂತಾಜನಕವಾಗಿದೆ.

ಈ ಅಂಶಗಳನ್ನು ಪರಿಗಣಿಸಿ ಸದರಿ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ನೋಟೀಸ್ ನೀಡಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ರನ್ವಯ ಏಕೆ ಸಮಾಪನೆಗೊಳಿಸಬಾರದೆಂದು ತಿಳಿಸಿದ್ದು ಹಾಗೂ ಸಂಘವನ್ನು ಸಮಾಪನೆಗೊಳಿಸಲು ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಲಿಖಿತ ರೂಪದಲ್ಲಿ ತಿಳಿಸಲು ಕೋರಿದ್ದು, ಇದುವರೆವಿಗೂ ಯಾವ ಆಡಳಿತ ಮಂಡಳಿ ಸದಸ್ಯರಿಂದಾಗಲೀ ಯಾವುದೇ ಆಕ್ಷೇಪಣೆ ಈ ಕಛೇರಿಗೆ ಸ್ವೀಕೃತವಾಗದೇ ಇರುವುದರಿಂದ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಸಂಘವನ್ನು ಪುನಃಶ್ಚೇತನಗೊಳಿಸಲು ಆಸಕ್ತಿ ಇಲ್ಲವೆಂದು ಮನಗಂಡು ಸದರಿ ಸಂಘವನ್ನು ಸಮಾಪನೆಗೊಳಿಸುವುದೇ ಸೂಕ್ತವೆಂದು ಪರಿಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ಹೇಳಿದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಬಿ. ನಾಗರಾಜ ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ) ಆದ ನಾನು ಸರ್ಕಾರದ ಅಧಿಸೂಚನೆ ಕ್ರ.ಸಂ. ಸಿ.ಎಂ.ಡಬ್ಲ್ಯೂ/69/ಸಿಎಲ್ಎಂ/01 ದಿನಾಂಕ: 21.11.01 ಹಾಗೂ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2)(ಬಿ) ಅನ್ವಯ ನನಗೆ ದತ್ತವಾದ ಅಧಿಕಾರದನ್ವಯ ಗದಗ ಮತ್ತು ನವಲಗುಂದ ತಾಲ್ಲೂಕು ಪ್ರೋಗ್ರೆಸೀವ್ ಫಾರ್ಮರ್ಸ್ ಸಹಕಾರ ಸಂಘ, ನಿ., ಗದಗ, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73 (1) ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ ಗದಗ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿ ಸಲ್ಲಿಸತಕ್ಕದ್ದು, ಅಲ್ಲದೆ ಸಂಘದ ಆಡಾವೆ ಪತ್ರದ ಆಧಾರದ ಮೇಲೆ ಆಧ್ಯತಾ ಪಟ್ಟಿ ತಯಾರಿಸಿ ಈ ಕೆಳಗೆ ಸಹಿ ಮಾಡಿದವರ ಅನುಮತಿ ಪಡೆದು ಆಸ್ತಿಯು ವಸೂಲಾದಂತೆ ಆಧ್ಯತೆ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ದತಿಯ ಪ್ರಸ್ತಾವೆ ಸಲ್ಲಿಸಲು ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ದಿನಾಂಕ: 30.09.2005ರಂದು ನೀಡಲಾಗಿದೆ.

ಸಹಕಾರ ಸಂಘಗಳ ಅಪರ ನಿಬಂಧಕರು,
(ಕೈಗಾರಿಕೆ ಮತ್ತು ಇತರೆ)

ಪಿ.ಆರ್.1552

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ರಾಮನಗರ ಉಪವಿಭಾಗ, ರಾಮನಗರ ರವರ ಸಮ್ಮುಖದಲ್ಲಿ**

**ವಿಷಯ :** ಶ್ರೀ ಯಲ್ಲೇಗೌಡ ರವರ ಸ್ಥಿರಾಸ್ತಿಯನ್ನು ರಾಮನಗರ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಹೆಸರಿಗಿದ್ದುದನ್ನು ವರ್ಗಾವಣೆ ಮಾಡುವ ಕುರಿತು.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಂಖ್ಯೆ: ಸಸಸನಿದಂ:46ಎಬಿಎನ್: 55:02-03, ದಿನಾಂಕ: 04.10.2002.
2. ಶ್ರೀ ಯಲ್ಲೇಗೌಡ ರವರು ಸ.ನಂ.ಗಳನಿಯಮ 38ರಡಿ ದಿನಾಂಕ: 16.08.05ರಂದು ಸಲ್ಲಿಸಲಾಗಿರುವ ಅರ್ಜಿ.

**ಪ್ರಸ್ತಾವನೆ:**

ಶ್ರೀ ಯಲ್ಲೇಗೌಡ ಬಿನ್ ಜವರೇಗೌಡ, ಪಾಲಬೋವಿದೊಡ್ಡಿ, ಹರಿಸಂದ್ರ ಕಸಬಾ ಹೋಬಳಿ, ರಾಮನಗರಂ ತಾಲ್ಲೂಕು ರವರ ವಿರುದ್ಧ ರಾಮನಗರಂ ತಾಲ್ಲೂಕು ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತರವರು ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರಡಿ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ ರವರ ಸಮ್ಮುಖದಲ್ಲಿ ಸಲ್ಲಿಸಲಾಗಿದ್ದ ದಾವೆ ಸಂಖ್ಯೆ: 1435ಎ: 01-02ರಲ್ಲಿ ಹೊರಡಿಸಲಾಗಿದ್ದ ಆದೇಶದನ್ವಯ ಬಾಕಿ ಮೊತ್ತ ವಸೂಲಿಗಾಗಿ ಈ ಕಛೇರಿಯಲ್ಲಿ ವಸೂಲಾತಿ ಕ್ರಮವನ್ನು ಸಂಖ್ಯೆ 107:93-94ರಲ್ಲಿ ಕ್ರಯವಿಟ್ಟಿದ್ದು, ವಸೂಲಾತಿ ಅಧಿಕಾರಿಯು ದಿನಾಂಕ: 29.04.2002ರಂದು ಬಹಿರಂಗ ಹರಾಜಿಗೆ ಗುರಿಪಡಿಸಲಾಗಿ ಹರಾಜಿನಲ್ಲಿ ಬಿಡ್ಡುದಾರರು ಬಾರದೇ ಇರುವುದರಿಂದ ಮಾರಾಟಾಧಿಕಾರಿಯವರು ನಿಯಮ 38ಎ(2) ರೀತ್ಯಾ ಸಲ್ಲಿಸಲಾಗಿದ್ದು ವರದಿಯನ್ನು ಆಧರಿಸಿ ಡಿಕ್ರಿ ಹೊಂದಲಾದ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ರಾಮನಗರಂ ಇವರ ಹೆಸರಿಗೆ ಸ್ಥಿರ ಸ್ವತ್ತನ್ನು ಉಲ್ಲೇಖ (1)ರ ಆದೇಶದಲ್ಲಿ ವರ್ಗಾಯಿಸಲಾಗಿತ್ತು.

ಶ್ರೀ ಯಲ್ಲೇಗೌಡರವರು ದಿನಾಂಕ: 16.08.2005ರಂದು ಅರ್ಜಿ ಸಲ್ಲಿಸಿ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ನಿಯಮಿತ ಬ್ಯಾಂಕ್ ರಾಮನಗರಕ್ಕೆ ತಮ್ಮಿಂದ ಬಾಕಿ ಇದ್ದ ಸಂಪೂರ್ಣ ಅಸಲು ಮೊತ್ತವನ್ನು ಪಾವತಿಸಿರುವುದಾಗಿ, ಆದಕಾರಣ ತಮ್ಮ ಸ್ವತ್ತನ್ನು ಪುನಃ ತಮಗೆ ವರ್ಗಾವಣೆ ಮಾಡಲು ಕೋರಿರುತ್ತಾರೆ. ಈ ಬಗ್ಗೆ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ರಾಮನಗರ ರವರಿಗೆ ನೋಟೀಸು ನೀಡಿ ಈ ಬಗ್ಗೆ ಹೇಳಿಕೆ ನೀಡಲು ಮತ್ತು ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸಲು ಸೂಚಿಸಲಾಗಿ ಬ್ಯಾಂಕಿನ ಕಾರ್ಯದರ್ಶಿಯು ತಮ್ಮ ಲಿಖಿತ ಹೇಳಿಕೆ ನೀಡಿ ಶ್ರೀ ಯಲ್ಲೇಗೌಡ ಬಿನ್ ಜವರೇಗೌಡ ರವರಿಂದ ಬಾಕಿ ಇದ್ದ ಮೊತ್ತವೂ ಸಂಪೂರ್ಣವಾಗಿ ಚುಕ್ತವಾಗಿದೆಯೆಂದು ಅವರ ಸ್ವತ್ತು ಬ್ಯಾಂಕಿನ ಹೆಸರಿನಲ್ಲಿರುವುದನ್ನು ಸದರಿಯವರ ಹೆಸರಿಗೆ ವರ್ಗಾವಣೆ ಮಾಡಲು ತಮ್ಮ ಯಾವುದೇ ಅಭ್ಯಂತರವಿಲ್ಲವೆಂದು ಹೇಳಿಕೆ ನೀಡಿರುತ್ತಾರೆ.

ಬ್ಯಾಂಕಿನ ಕಾರ್ಯದರ್ಶಿಯು ನೀಡಲಾಗಿರುವ ಹೇಳಿಕೆ ಮತ್ತು ಹಾಜರುಪಡಿಸಲಾಗಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಶ್ರೀ ಯಲ್ಲೇಗೌಡರವರು ರಾಮನಗರಂ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಈ ಬ್ಯಾಂಕಿಗೆ ಬಾಕಿ ಇದ್ದ ಸಂಪೂರ್ಣ ಮೊತ್ತವನ್ನು ಚುಕ್ತ ಮಾಡಿರುವುದರಿಂದ ಉಲ್ಲೇಖ (1)ರ ಆದೇಶದಲ್ಲಿ ಶ್ರೀ ಯಲ್ಲೇಗೌಡ ರವರ ಸ್ಥಿರಾಸ್ಥಿಯನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲಾಗಿದ್ದುದನ್ನು ರದ್ದುಪಡಿಸುವ ಸಂಬಂಧ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

**ಸಂಖ್ಯೆ: ಸಸಸನಿದಂ 46: ಅಮಲ್ಜಾರಿ:05:05-06, ದಿನಾಂಕ: 6ನೇ ಅಕ್ಟೋಬರ್, 2005**

ವಿ. ಗಂಗಾಧರಪ್ಪ, ಸ.ಸಂ. ಸ.ನಿ. ರಾಮನಗರ ಉಪವಿಭಾಗ, ರಾಮನಗರ ಆದ ನಾನು ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 (ಬಿ), ಸ.ಸಂ.ನಿಯಮ 38(ಎ) (15) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69:ಸಿಎಲ್ಎಂ:01 ದಿನಾಂಕ: 21.11.01ರಡಿ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಉಲ್ಲೇಖ (1)ರ ಆದೇಶದಲ್ಲಿ ಶ್ರೀ ಯಲ್ಲೇಗೌಡ ಬಿನ್ ಜವರೇಗೌಡ, ಪಾಲಬೋವಿದೊಡ್ಡಿ ಇವರಿಗೆ ಸೇರಿದ ಸ್ಥಿರಾಸ್ತಿ ಸ್ವತ್ತನ್ನು, ರಾಮನಗರಂ ತಾಲ್ಲೂಕು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ ಇವರ ಹೆಸರಿಗೆ ವರ್ಗಾಯಿಸಲಾಗಿದ್ದು, ಷೆಡ್ಯೂಲ್‌ನಲ್ಲಿ ತಿಳಿಸಲಾಗಿರುವ ವರ್ಗಾವಣೆಯಾದ ಆದೇಶವನ್ನು ರದ್ದುಪಡಿಸಿ ಸದರಿ ಸ್ವತ್ತನ್ನು ಶ್ರೀ ಯಲ್ಲೇಗೌಡರವರ ಹೆಸರಿಗೆ ವರ್ಗಾವಣೆ ಮಾಡಲು ಆದೇಶ ನೀಡಿರುತ್ತೇನೆ.

ಸಹಕಾರ ಸಂಘಗಳ ಕಾಯ್ದೆ ಅನ್ವಯ ನಮೂನೆ 8ರ ನಿಗದಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯದ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

**ಪರಿಶಿಷ್ಟ**

| ಕ್ರ.ಸಂ. | ಹೆಸರು | ಸರ್ವೆ ನಂ. | ಎಕರೆ ಗುಂಟೆ | ತರಹ | ಗ್ರಾಮ |
|---|---|---|---|---|---|
| 1. | ಕಾರ್ಯದರ್ಶಿ, ರಾಮನಗರಂ ತಾಲ್ಲೂಕು. ಪ್ರಾ.ಕೃ ಮತ್ತು ಗ್ರಾ.ಅ. ಬ್ಯಾಂಕ್.ನಿ. | 10 | 2.07 | ಖುಷ್ಕಿ | ಹಳ್ಳಿಮಾಳ |

ಈ ಆದೇಶವನ್ನು ದಿನಾಂಕ: 06.10.2005ರಂದು ನನ್ನ ಸಹಿ ಹಾಗೂ ಕಛೇರಿ ಮೊಹರು ಮೂಲಕ ಹೊರಡಿಸಲಾಗಿದೆ.

ಸ.ಸಂ.ಸ.ನಿ. ರಾಮನಗರ
ಉಪ ನಿಬಂಧಕರು, ರಾಮನಗರ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ರಾಮನಗರಂ ಉಪವಿಭಾಗ, ರಾಮನಗರಂ
## ನಮೂನೆ-8
## (ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿ 1960 ನಿಯಮ 38 ಎ(15)ನ್ನು ನೋಡಿ)
## ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 (ಬಿ) ಪ್ರಕಾರ
## ಆಸ್ತಿ ವರ್ಗಾವಣೆ ಮಾಡಲು ಸರ್ಟಿಫಿಕೇಟ್

ಬೆಂಗಳೂರು ಗ್ರಾಮಾಂತರ ಜಿಲ್ಲೆ ರಾಮನಗರಂ ತಾಲ್ಲೂಕು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ರಾಮನಗರಂ ಇದರ ಕಾರ್ಯದರ್ಶಿಯವರು ಸಹಕಾರ ಸಂಘಗಳ ಕಾಯ್ದೆ 1959 ಕಲಂ 71ರಡಿ ಪಡೆದ ಆದೇಶದನ್ವಯ ಸದರಿ ಬ್ಯಾಂಕ್‌ನ ಸಾಲಗಾರರಾದ ಶ್ರೀ ಯಲ್ಲೇಗೌಡ ಬಿನ್ ಜವರೇಗೌಡ, ಪಾಲಬೋವಿದೊಡ್ಡಿ, ಹರಿಸಂದ್ರ ಅಂಚೆ, ಕಸಬಾ ಹೋಬಳಿ, ರಾಮನಗರಂ ರವರಿಂದ ಸಂಪೂರ್ಣ ಮೊತ್ತ ಚುಕ್ತವಾಗಿದ್ದು ಇವರ ಸ್ವತ್ತು ಬ್ಯಾಂಕಿನ ಹೆಸರಿಗೆ ಈ ಕಛೇರಿಯ ಆದೇಶ ಸಂಖ್ಯೆ: ಸಸಸನಿ: 46:ಎಬಿಎನ್: 55:2002-03 ದಿನಾಂಕ: 04.10.2002ರಲ್ಲಿ ವರ್ಗಾಯಿಸಿದ್ದನ್ನು ಸದರಿ ಬ್ಯಾಂಕು ಮಾರಾಟ ಮಾಡಿಲ್ಲದಿರುವುದು ಮನವರಿಕೆಯಾಗಿದೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು ಸಂಪೂರ್ಣವಾಗಿ ಪಾವತಿಯಾಗಿದ್ದು ಈ ಕಛೇರಿಯ ಆದೇಶ ಸಂಖ್ಯೆ: ಸಸಂಸನಿ:46: ಅಮಲ್ಜಾರಿ:05: 05-06 ದಿನಾಂಕ:10.10.2005ರಲ್ಲಿ ರಾಮನಗರಂ ತಾಲ್ಲೂಕು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿಯಮಿತ, ರಾಮನಗರ ಹೆಸರಿಗೆ ಷೆಡ್ಯೂಲ್ ಸ್ಥಿರಾಸ್ಥಿ ವರ್ಗಾವಣೆ ರದ್ದು ಮಾಡಲಾಗಿರುವುದರಿಂದ ಷೆಡ್ಯೂಲ್ ಸ್ಥಿರಾಸ್ತಿಯು ಶ್ರೀ ಯಲ್ಲೇಗೌಡ ಬಿನ್ ಜವರೇಗೌಡ ಇವರಿಗೆ ಹಕ್ಕು ಅಧಿಕರ ನಾಮ ಮತ್ತು ಬಾಧ್ಯತೆಯು ನಿರ್ದಿಷ್ಟವಾಗಿರತಕ್ಕದ್ದೆಂದು ಮತ್ತು ಸದರಿ ಸ್ವತ್ತನ್ನು ಅವರ ಇಚ್ಛಾನುಸಾರ ಉಪಯೋಗಿಸಲು ಅರ್ಹರಿರುತ್ತಾರೆಂದು ಸ.ಸಂ.ನಿಯಮ 38(ಎ) (15)ಗೆ ಒಳಪಟ್ಟು ಸ.ಸಂ. ಕಾಯ್ದೆ 1959 ಕಲಂ 101(ಬಿ)ರ ಪ್ರಕಾರ ಈ ಮೂಲಕ ಆದೇಶ ನೀಡಲಾಗಿದೆ.

**ಆಸ್ತಿ ವಿವರ**

| ಕ್ರ.ಸಂ. | ಸರ್ವೆ ನಂ. | ಗ್ರಾಮ | ವಿಸ್ತೀರ್ಣ | ತರಹೆ | ವರ್ಗಾವಣೆ ಆದೇಶದನ್ವಯ ಹಕ್ಕು ಬಾಧ್ಯತೆ |
|---|---|---|---|---|---|
| 1. | 10 | ಹಳ್ಳಿಮಾಳ | 2.07 | ಖುಷ್ಕಿ | ಯಲ್ಲೇಗೌಡ ಬಿನ್ ಜವರೇಗೌಡ |

ಸ.ಸಂ.ಸಹಾಯಕ ನಿಬಂಧಕರು,
ರಾಮನಗರ ಉಪ ವಿಭಾಗ, ರಾಮನಗರ.

ಪಿ.ಆರ್.1554

## ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ರವರ ನ್ಯಾಯಾಲಯದಲ್ಲಿ
## ದಾವಾ ಸಂಖ್ಯೆ: ಜೆಆರ್‌ಬಿ:1461:2005-06

**ವಾದಿ**

ಕುಮಾರಿ ಮಂಗಳ ಬಿನ್ ಕೆ.ಎಸ್. ಮೂರ್ತಿ, ಇವರ ಪರವಾಗಿ ಜಿ.ಪಿ.ಎ. ಹೋಲ್ಡರ್ ಕೆ. ಸದಾನಂದ ಶಾಸ್ತ್ರಿ, ಬಿನ್ ಲೇಟ್ ಶ್ರೀನಿವಾಸ ಶಾಸ್ತ್ರಿ. ವಾಸ: ನಂ.44:1, ಪಶ್ಚಿಮಾಂಜನೇಯ ದೇವಾಸ್ಥಾನರಸ್ತೆ, ಬಸವನಗುಡಿ, ಬೆಂಗಳೂರು-4.

**ವಿರುದ್ಧ**

**ಪ್ರತಿವಾದಿಗಳು**

1. ಕೆ. ಗುರುರಾಜ್ ಬಿನ್ ಲೇಟ್ ಕೃಷ್ಣಮೂರ್ತಿ ಸಿ. ಮನೋನ್ಮಯಿ ಸೊಸೈಟಿಯ ಮಾಜಿ ಅಧ್ಯಕ್ಷೆ.
2. ನರಸಿಂಹಮೂರ್ತಿ ಬಿನ್ ರಾಮಾಚಾರ್, ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.
3. ಶ್ರೀಮತಿ ಪದ್ಮಾವತಿ, ಬಿನ್ ಶ್ರೀನಿವಾಸ ಮೂರ್ತಿ, ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.
4. ಶ್ರೀಮತಿ ಮಾಲತಿಬಾಯಿ ಕೋಂ ಲೇಟ್ ಕೃಷ್ಣೋಜಿರಾವ್, ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.
   ಪ್ರತಿವಾದಿ 1 ರಿಂದ 4 ರವರ ವಾಸ:
   ನಂ.40, 12ನೇ ಮೈನ್ಸ್, 12ನೇ ಕ್ರಾಸ್, ಕಾಳಿದಾಸ ಲೇಔಟ್, ಶ್ರೀನಗರ, ಬೆಂಗಳೂರು-50.
5. ವಾಸದೇವ ಭಟ್, ಬಿನ್ ಶ್ರೀನಿವಾಸ ಭಟ್, ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.
6. ವಿಷ್ಣುಮೂರ್ತಿ, ಬಿನ್ ಶ್ರೀನಿವಾಸ ಭಟ್, ಮನೋನ್ಮಯಿ ಸೊಸೈಟಿಯ ಮಾಜಿ ಅಧ್ಯಕ್ಷರು.
7. ಶ್ರೀಮತಿ ಅನುಪಮ, ಕೋಂ ವಿಷ್ಣುಮೂರ್ತಿ ಭಟ್, ಮನೋನ್ಮಯಿ ಸೊಸೈಟಿಯ ಮಾಜಿ ಅಧ್ಯಕ್ಷರು.
   ಪ್ರತಿವಾದಿ 5 ರಿಂದ 7ರ ವರೆಗೆ ವಾಸ: ನಂ.44, ಎಲ್.ಐ.ಜಿ., 8ನೇ ಕ್ರಾಸ್, ಕೆಂಗೇರಿ ಉಪನಗರ, ಬೆಂಗಳೂರು-60.
8. ಶ್ರೀಮತಿ ಸಂಧ್ಯಾ ಕೆ. ರಾವ್. ಕೋಂ ಕೆ. ಗುರುರಾಜ್, ಮನೋನ್ಮಯಿ ಸೊಸೈಟಿಯ ಮಾಜಿ ನಿರ್ದೇಶಕರು.
9. ಕೆ. ತಿರುಮಲೇಶ್, ಬಿನ್ ಕೃಷ್ಣೋಜಿ ರಾವ್, ಮನೋನ್ಮಯಿ ಸಂಸ್ಥೆಯ ಮಾಜಿ ನಿರ್ದೇಶಕರು.
   ಪ್ರತಿವಾದಿ 8 ಮತ್ತು 9 ವಾಸ:
   ನಂ.40, 12ನೇ ಮೈನ್, 12ನೇ ಕ್ರಾಸ್, ರಾಘವೇಂದ್ರ ದೇವಸ್ಥಾನದ ಹಿಂದೆ, ಕಾಳಿದಾಸ ಲೇಔಟ್, ಶ್ರೀನಗರ, ಬೆಂಗಳೂರು-50.
10. ಕೆ.ಎಸ್. ಸುಬ್ರಮಣ್ಯ ಬಿನ್ ಸತ್ಯನಾರಾಯಣ, ಮಾಜಿ ಕಾರ್ಯದರ್ಶಿ, ಮನೋನ್ಮಯಿ ಸೊಸೈಟಿ, ವಾಸ: ನಂ.1048, 19ನೇ 'ಎ' ರಸ್ತೆ, ಹೆಚ್.ಬಿ. ಆರ್. ಲೇಔಟ್, ನಾಗವಾರ, ಬೆಂಗಳೂರು-45.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಪ್ರಕಾರ ಸ್ಥಿರ ಆಸ್ತಿಯನ್ನು ಅಟ್ಯಾಚ್ ಬಗ್ಗೆ ನೋಟೀಸ್:**

ವಾದಿಯು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70ರ ಅನ್ವಯ ಈ ನ್ಯಾಯಾಲಯದಲ್ಲಿ ಹೂಡಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ.3,67,409-00ಗಳನ್ನು ದಿನಾಂಕ02.09.2004 ರಿಂದ ಸಾಲಿಯಾನ ಶೇಕಡಾ 18 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯು ದಾವಾ ಅರ್ಜಿಯನ್ನು ಮೇಲ್ಕಂಡ ಸಂಖ್ಯೆಯಲ್ಲಿ ನೋಂದಾಯಿಸಿಕೊಂಡು ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 103 ಅನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳು 1, 8 ಮತ್ತು 9 ಇವರುಗಳ ಹೆಸರಿನಲ್ಲಿರುವ ಈ ಕೆಳಗಿನ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಆದೇಶ ಮಾಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿ 8 ಮತ್ತು 9 ಅವರ ಹೆಸರಿನಲ್ಲಿ ಈಗಾಗಲೇ ಅರ್ಜಿಯಲ್ಲಿ ತೋರಿಸಿರುವಂತೆ ಆಸ್ತಿಗಳು ಇರುವುದು ಕಂಡು ಬಂದಿರುತ್ತದೆ. ಸದರಿ 'ಎ' ಮತ್ತು 'ಬಿ' ಷೆಡ್ಯೂಲ್ ಆಸ್ತಿಗಳನ್ನು ಸಂಘದ ಹಣದಿಂದ ಹೊಂದಿರುವುದಾಗಿ ತಿಳಿದು ಬಂದಿರುತ್ತದೆ. 'ಸಿ' ಷೆಡ್ಯೂಲ್‌ನಲ್ಲಿ ತೋರಿಸಿರುವ ಸ್ಥಿರಾಸ್ತಿಯಾದ ಕಟ್ಟಡವು ಕಾಳಿದಾಸ ಲೇಔಟ್‌ನಲ್ಲಿದ್ದು, ಈ ಸ್ಥಿರಾಸ್ತಿಯನ್ನು ಕೊಳ್ಳಲು ಮನೋನ್ಮಯಿ ಸೊಸೈಟಿಯ ಹಣವನ್ನು ಉಪಯೋಗಿಸಿರುವುದು ಅರ್ಜಿದಾರರ ಪ್ರಮಾಣಪತ್ರದಿಂದ ಕಂಡುಬಂದಿರುತ್ತದೆ. ಇದಲ್ಲದೆ, ಈ ಸದರಿ ಆಸ್ತಿಯ ಮಾಲೀಕರಾದ ರಾಘವೇಂದ್ರ ರಾವ್, ಇದೇ ಆಸ್ತಿಯ ಮೇಲೆ ಆಧಾರವಾಗಿಟ್ಟು ಸೊಸೈಟಿಯಿಂದ ಸಾಲ ಪಡೆದುಕೊಂಡಿರುವುದು ಈ ಪ್ರಮಾಣಪತ್ರದಿಂದ ತಿಳಿದು ಬಂದಿರುತ್ತದೆ. ಆದ್ದರಿಂದ ಈ 'ಸಿ' ಶೆಡ್ಯೂಲ್ ಆಸ್ತಿ ಕೂಡಾ ಮೊದಲನೇ ಪ್ರತಿವಾದಿ ಹೆಸರಿನಲ್ಲಿ ಮಾರಾಟದ ಒಪ್ಪಂದದ ಕರಾರು ಆಗಿರುವುದಾಗಿ ತಿಳಿದು ಬಂದಿರುತ್ತದೆ. ಪ್ರತಿವಾದಿಗಳಾದ 1, 8 ಮತ್ತು 9 ರವರುಗಳ ಹೆಸರಿನಲ್ಲಿರುವ ಕೆಳಕಂಡ 'ಎ' 'ಬಿ' ಮತ್ತು 'ಸಿ' ಸೊತ್ತುಗಳನ್ನು ಪರಾಭಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದೇ ಇದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಡಿಕ್ರಿ ನೀಡಿದ್ದರೂ, ಸದರಿ ಅವಾರ್ಡ್: ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ಕಲಂ 103ರ ರೀತ್ಯ ಸಲ್ಲಿಸಿರುವ ಅರ್ಜಿಗಳನ್ನು ಮತ್ತು ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯಲ್ಲಿ ತಿಳಿಸಿರುವ ವಿಷಯಗಳು ಮೇಲ್ನೋಟಕ್ಕೆ ನಿಜವೆಂದು ಕಂಡು ಬರುತ್ತದೆ. ಅಲ್ಲದೆ ಪ್ರತಿವಾದಿಗಳ ಈ ಕೆಳಗೆ ಶೆಡ್ಯೂಲ್‌ನಲ್ಲಿ ಕಾಣಿಸಿರುವ 'ಎ' 'ಬಿ' 'ಸಿ' ಸ್ವತ್ತುಗಳನ್ನು ಮಾರಾಟ ಮಾಡದಂತೆ ತಡೆಯದಿದ್ದಲ್ಲಿ ವಾದಿ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್: ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

ಈ ಮೇಲಿನ ಪರಿಸ್ಥಿತಿಯಲ್ಲಿ ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ತಿಳಿಸಿರುವ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ಹಾಗೂ ಸರ್ಕಾರದ ಅಧಿಸೂಚನೆಯ ಕ್ರಮಸಂಖ್ಯೆ ಸಿಎಂಡಬ್ಲ್ಯೂ:69:ಸಿಎಲ್‌ಎಂ 2001: ದಿನಾಂಕ: 21.11.2001ರ ಸ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ- ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ವಿಭಾಗ, ಬೆಂಗಳೂರು ಆದ ನಾನು ಪ್ರತಿವಾದಿಗಳಾದ 1, 8 ಮತ್ತು 9 ರವರುಗಳ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ಗಳಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ.3,67,409-00 ಗಳನ್ನು ಬಡ್ಡಿಸಹಿತ ಈ ನ್ಯಾಯಾಲಯದಲ್ಲಿ ಅಮಾನತ್ತು ಖಾತೆಗೆ ಜಮಾ ಮಾಡಿ ದಿನಾಂಕ: 11.11.2005 ರಂದು ಬೆಳಿಗ್ಗೆ 11.00 ಗಂಟೆಯೊಳಗಾಗಿ ಅಧಿಕೃತ ಚಲನೆ: ರಶೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದ ನಿಗದಿತ ದಿನಾಂಕದೊಳಗೆ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು. ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವೂ ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**8ನೇ ಪ್ರತಿವಾದಿಗೆ ಸೇರಿದ ಷೆಡ್ಯೂಲ್ ಸ್ವತ್ತಿನ ವಿವರ "ಎ" ಷೆಡ್ಯೂಲ್**

1) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನ ಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ. 52ನೇ ಎಫ್ ಕೋಡ್ (ಪಿ.ಪಿ.12) ಖುಷ್ಕಿ ಒಂದು ಎಕರೆ ಮತ್ತು ಇದೇ ಸರ್ವೆ ನಂ. 52ನೇ ಹೆಚ್ ಕೋಡು (ಪಿ.ಪಿ.14) ಖುಷ್ಕಿ 4 ಎಕರೆ ಎರಡು ತಾಕು ಜಮೀನು ಒಟ್ಟು 5 ಎಕರೆ ಖುಷ್ಕಿ ಜಮೀನಿಗೆ ಚಕ್ಕುಬಂದಿ:

ಪೂರ್ವಕ್ಕೆ : ಶ್ರೀಮತಿ ಸಂಧ್ಯಾರವರ ಸದರಿ ಸರ್ವೆ ನಂಬರಿನ ಜಮೀನು.

ಪಶ್ಚಿಮಕ್ಕೆ : ಸದರಿ ಸರ್ವೆ ನಂಬರಿನಲ್ಲಿರುವ ಖರೀದಿದಾರರಾದ ತಿರುಮಲ್ಲೇಶ್‌ರವರ ಜಮೀನು.

ಉತ್ತರಕ್ಕೆ : ಸರ್ಕಾರಿ ತೊರೆ ಹಳ್ಳ ಮತ್ತು

ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡ.

2) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ. 52ನೇ ಕೋಡು (ಪಿ.ಪಿ.8) ಖುಷ್ಕಿ ಒಂದು ಎಕರೆ ಜಮೀನಿಗೆ ಚಕ್ಕುಬಂದಿ:

ಪೂರ್ವಕ್ಕೆ : ಶ್ರೀ ವೆಂಕಟಪ್ಪನವರ ಜಮೀನು.

ಪಶ್ಚಿಮಕ್ಕೆ : ಶ್ರೀ ಮುನಿಸ್ವಾಮಯ್ಯನವರ ಜಮೀನು.

ಉತ್ತರಕ್ಕೆ : ರಸ್ತೆ, ಮತ್ತು

ದಕ್ಷಿಣಕ್ಕೆ : ಖರೀದಿದಾರರಾದ ಶ್ರೀ ತಿರುಮಲ್ಲೇಶ್‌ರವರ ಜಮೀನು.

3) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52 ನೇ (ಪಿ.ಪಿ.11) ಎಂ.ಆರ್. 38:2003-04ರಲ್ಲಿ ಮಾರಾಟಗಾರರ ಹೆಸರಿಗೆ ಖಾತೆಯಾಗಿರತಕ್ಕ ಖಾತೆ ನಂ.2 ಎಂದು ನಂಬರಾಗಿರತಕ್ಕ ಖುಷ್ಕಿ 20 ಗುಂಟೆ ಜಮೀನಿನ ಸ್ಥಿರ ಜಮೀನಿಗೆ ಚಕ್ಕುಬಂದಿ:

ಪೂರ್ವಕ್ಕೆ : ನಿಮ್ಮ ಸ್ವಂತ ಜಮೀನು.

ಪಶ್ಚಿಮಕ್ಕೆ : ನಿಮ್ಮ ಸ್ವಂತ ಜಮೀನು.

ಉತ್ತರಕ್ಕೆ : ದಾಸರ ರಾಮಯ್ಯನ ಜಮೀನು.

ದಕ್ಷಿಣಕ್ಕೆ : ಸ್ವಂತ ಜಮೀನು.

4) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ 7ನೆ ಕೋಡು (ಪಿ.ಪಿ.11) ಖುಷ್ಕಿ ಸುಮಾರು 20 ಗುಂಟೆ ಜಮೀನಿನ ಸ್ಥಿರ ಜಮೀನಿಗೆ ಚಕ್ಕುಬಂದಿ:

ಪೂರ್ವಕ್ಕೆ : ನಿಮ್ಮ ಸ್ವಂತ ಜಮೀನು.

ಪಶ್ಚಿಮಕ್ಕೆ : ನಂಜಯ್ಯನ ಜಮೀನು.

ಉತ್ತರಕ್ಕೆ : ದಾಸರ ರಾಮಯ್ಯನ ಜಮೀನು.

ದಕ್ಷಿಣಕ್ಕೆ : ನಿಮ್ಮ ಸ್ವಂತ ಜಮೀನು.

5) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ ಜೆ (ಪಿ.ಪಿ.13) ರಲ್ಲಿ ಇರತಕ್ಕ 4 ಎಕರೆ ಜಮೀನಿನಲ್ಲಿ ಪಶ್ಚಿಮ ಭಾಗಕ್ಕೆ 2.00 (ಎರಡು ಎಕರೆ) ಖುಷ್ಕಿ ಜಮೀನಿಗೆ ಚಕ್ಕುಬಂದಿ:

ಪೂರ್ವಕ್ಕೆ : ಇದೇ ಸರ್ವೆ ನಂಬರಿನಲ್ಲಿ ಶ್ರೀಮತಿ ಸಂಧ್ಯಾರವರಿಗೆ ಕ್ರಯ ಮಾಡಿರುವ ಆಸ್ತಿ.

ಪಶ್ಚಿಮಕ್ಕೆ : ಮುನಿಸ್ವಾಮಯ್ಯನವರ ಜಮೀನು.

ಉತ್ತರಕ್ಕೆ : ಇದೇ ಸರ್ವೆ ನಂಬರಿನಲ್ಲಿ ಕೆ.ಎಸ್.ಮಂಜುನಾಥ ಉಳಿಸಿಕೊಂಡಿರುವ ಜಮೀನು.

ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡ ಕಾವಲ್.

### 9ನೇ ಪ್ರತಿವಾದಿಗೆ ಸೇರಿದ ಷೆಡ್ಯೂಲ್ ಸ್ವತ್ತಿನ ವಿವರ: 'ಬಿ' ಷೆಡ್ಯೂಲ್

1) ತುಮಕೂರು ಜಿಲ್ಲೆ, ಕುಣಿಗಲ್, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.52ನೇ (ಪಿ.ಪಿ.13)ರಲ್ಲಿ ಇರತಕ್ಕ 4 ಎಕರೆ ಜಮೀನಿನಲ್ಲಿ ಪಶ್ಚಿಮ ಭಾಗ 2.00 (ಎರಡು ಎಕರೆ) ಖುಷ್ಕಿ ಜಮೀನಿಗೆ ಚಕ್ಕುಬಂದಿ:

ಪೂರ್ವಕ್ಕೆ : ಕೆ.ಎಸ್. ಪ್ರಭಾಕರ್ ರವರ ಜಮೀನು.

ಪಶ್ಚಿಮಕ್ಕೆ : ಇದೇ ಸರ್ವೆ ನಂಬರಿನಲ್ಲಿ ಶ್ರೀ ತಿರುಮಲ್ಲೇಶ್‌ರವರಿಗೆ ಕ್ರಯಮಾಡಿರುವ ಆಸ್ತಿ.

ಉತ್ತರಕ್ಕೆ : ಇದೇ ಸರ್ವೆ ನಂಬರಿನಲ್ಲಿ ಕೆ.ಎಸ್.ಮಂಜುನಾಥ್ ಉಳಿಸಿಕೊಂಡಿರುವ ಜಮೀನು.

ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡಕಾವಲ್.

2) ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿ, ರಾಯಗೋನಹಳ್ಳಿ, ಗ್ರಾಮಕ್ಕೆ ಸೇರಿದ ಸರ್ವೆ ನಂ. 52ನೇ ಇ ಕೋಡು ಖುಷ್ಕಿ 3.00 ಎಕರೆ ಮತ್ತು ಇದೇ ಸರ್ವೆ ನಂ.52ನೇ ಎಫ್ ಕೋಡು ಖುಷ್ಕಿ 3.00 ಎಕರೆ 2 ತಾಕು ಜಮೀನು ಹಾಲಿ ಪಿ.ಪಿ.11 ಮತ್ತು ಪಿ.ಪಿ. 12ನೇ ಪೋಡು ನಂಬರುಗಳಾಗಿರತಕ್ಕ ಒಟ್ಟು 6.00 ಎಕರೆ ಖುಷ್ಕಿ ಜಮೀನಿನಲ್ಲಿ 3.00 ಎಕರೆ ತೆಂಗು ಮತ್ತು ಉಳಿಕೆ 3.00 ಎಕರೆ ಖುಷ್ಕಿ ಜಮೀನಿನಲ್ಲಿ ತೆಂಗು ಇರುವುದಿಲ್ಲ ಸದರಿ ಜಮೀನಿಗೆ ಚಕ್ಕುಬಂದಿ:

ಪೂರ್ವಕ್ಕೆ : ವೆಂಕಟಯ್ಯ ಮತ್ತು ಬೋರಯ್ಯನವರ ಜಮೀನು.

ಪಶ್ಚಿಮಕ್ಕೆ : ಸದರಿ ಸರ್ವೆ ನಂಬರಿನ ಮಾಲೀಕರಾದ ವಿಜಯಮ್ಮನವರಿಂದ ಶ್ರೀ ತಿರುಮಲ್ಲೇಶ್ವರ್‌ರವರಿಗೆ ಕ್ರಯದ ಕರಾರು ಮಾಡಿಕೊಂಡಿರುವ ಜಮೀನು.

ಉತ್ತರಕ್ಕೆ : ಸರ್ಕಾರಿ ತೊರೆಹಳ್ಳ.

ದಕ್ಷಿಣಕ್ಕೆ : ರಂಗಸ್ವಾಮಿ ಗುಡ್ಡ ಕಾವಲ್.

### 1ನೇ ಪ್ರತಿವಾದಿಗೆ ಸೇರಿದ ಶೆಡ್ಯೂಲ್ ಸ್ವತ್ತಿನ ವಿವರ: 'ಸಿ' ಷೆಡ್ಯೂಲ್

ಮನೋನ್ಮಯಿ ಕ್ರೆಡಿಟ್ ಸೊಸೈಟಿಗೆ ಒಪ್ಪಂದದ ಮೂಲಕ ಮಾರಾಟವಾಗಿ ಮೊದಲನೇ ಪ್ರತಿವಾದಿಯ ಹೆಸರಿನಲ್ಲಿ ಒಪ್ಪಂದದ ಕರಾರು ಆಗಿರುವ ಮನೆ ಸ್ವತ್ತು ಬೆಂಗಳೂರು ನಗರ, ಬೆಂಗಳೂರು: 560 050, ಶ್ರೀನಗರ, ಕಾಳಿದಾಸ ಬಡಾವಣೆಯ 3ನೇ ಅಡ್ಡರಸ್ತೆ, 1ನೇ ಮುಖ್ಯರಸ್ತೆ, ನಂ. 68ರಲ್ಲಿರುವ ಕಟ್ಟಿದ ಮನೆ ವಿಸ್ತೀರ್ಣ 37x28 ಅಡಿಗಳು ಅಳತೆಯಿರುತ್ತದೆ. ಈ ಸ್ವತ್ತು 'ಸಿ' ಶೆಡ್ಯೂಲ್‌ಗೆ ಸೇರಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 30.09.2005ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ವಿಭಾಗ, ಬೆಂಗಳೂರು.

ಪಿ.ಆರ್.1555

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಅಧಿಸೂಚನೆ

### ಸಂಖ್ಯೆ:ಅಪಜೀ 26 ಎಫ್‌ಎಎಫ್ 2004, ಬೆಂಗಳೂರು, ದಿನಾಂಕ: 20ನೇ ಸೆಪ್ಟೆಂಬರ್, 2005

1963ನೇ ಕರ್ನಾಟಕ ಅರಣ್ಯ ಅಧಿನಿಯಮದ (1964)ನೇ ಇಸವಿಯ ಕರ್ನಾಟಕ ಅರಣ್ಯ ಅಧಿನಿಯಮ-5) 4ನೇ ಪ್ರಕರಣದ ನಿಯಮಗಳ ಮೇರೆಗೆ ಕರ್ನಾಟಕ ರಾಜ್ಯ ಸರ್ಕಾರವು ಈ ಮೂಲಕ:

1. ಮಂಡ್ಯ ಜಿಲ್ಲೆ, ಶ್ರೀರಂಗಪಟ್ಟಣ ತಾಲ್ಲೂಕು, ಗೆಂಡೆಹೊಸಳ್ಳಿ ಗ್ರಾಮದ ಜಮೀನನ್ನು ಇದಕ್ಕೆ ಲಗತ್ತಾಗಿರುವ ಅನುಸೂಚಿಯಲ್ಲಿ ವಿವರಿಸಲ್ಪಟ್ಟಿರುವ ಚಕ್ಕುಬಂದಿಯುಳ್ಳ ಪ್ರದೇಶವನ್ನು "ಮೀಸಲು ಅರಣ್ಯ"ವನ್ನಾಗಿ ಮಾರ್ಪಡಿಸಲು ಉದ್ದೇಶಿಸಲಾಗಿದೆ.

2. ಮೇಲ್ಕಂಡ ಪ್ರಕರಣದ 1(ಸಿ) ಕಲಂ ನ ಅನುಸಾರ ಕರ್ನಾಟಕ ರಾಜ್ಯ ಸರ್ಕಾರವು ಅಂತಹ ಎಲ್ಲೆಗಳಲ್ಲಿ ಅಡಗಿರುವ ಜಮೀನಿನಲ್ಲಿ ಅಥವಾ ಅದರ ಮೇಲೆ ಅಥವಾ ಅಂತಹ ಜಮೀನಿನ ಯಾವುದಾದರೂ ಅರಣ್ಯ ಉತ್ಪತ್ತಿಗೆ ಹಕ್ಕನ್ನು ತರುವ ಅಥವಾ ಹಕ್ಕಿದೆಯೆಂದು ಹೇಳುವ ಯಾವ ವ್ಯಕ್ತಿಗಾದರೂ ಯಾವುದಾದರೂ ಹಕ್ಕುಗಳಿವೆಯೇ? ಅವುಗಳ ಸ್ವಭಾವವೇನು? ಮತ್ತು ಅವು ಎಷ್ಟರ ಮಟ್ಟಿನವು ಎಂಬ ಅಂಶಗಳನ್ನು ವಿಚಾರಣೆ ಮಾಡಿ, ನಿಶ್ಚಯಿಸಿ ಅವುಗಳ ವಿಷಯದಲ್ಲಿ ಮೇಲ್ಕಂಡ ಅಧಿನಿಯಮದ ಎರಡನೇ ಅಧ್ಯಾಯದಲ್ಲಿ ವಿಧಿಸಿರುವಂತೆ ಕ್ರಮ ನಡೆಸುವುದಕ್ಕೆ ಮಂಡ್ಯ ಉಪ ವಿಭಾಗದ ಸಹಾಯಕ ಆಯುಕ್ತರು (ಅಸಿಸ್ಟೆಂಟ್ ಕಮೀಷನರ್) ರವರನ್ನು ಅರಣ್ಯ ವ್ಯವಸ್ಥಾಧಿಕಾರಿಗಳನ್ನಾಗಿ ನಿಯಮಿಸಿರುತ್ತದೆ.

3. ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಈ ವಿಚಾರಣೆಯಲ್ಲಿ ಅರಣ್ಯ ವ್ಯವಸ್ಥಾಧಿಕಾರಿಗಳಿಗೆ ಸರ್ಕಾರದ ಪರವಾಗಿ ಸಹಾಯ ಮಾಡಲು ಹಾಜರಾಗಲು ಅಧಿಕಾರ ನೀಡಿರುತ್ತದೆ.

4. ಮೇಲ್ಕಂಡ ಅಧಿನಿಯಮದ 16ನೇ ಪ್ರಕರಣದ 1ನೇ ಕಲಂ ನಿಂದ ಕೊಡಲ್ಪಟ್ಟಿರುವ ಅಧಿಕಾರಿಗಳನ್ನು ಅನುಸರಿಸಿ ಕರ್ನಾಟಕ ರಾಜ್ಯ ಸರ್ಕಾರದವರು, ಕರ್ನಾಟಕ ರೆವಿನ್ಯೂ ಅಪಲೇಟ್ ಟ್ರಿಬ್ಯುನಲ್, ಅರಣ್ಯ ವ್ಯವಸ್ಥಾಧಿಕಾರಿಗಳು ಸದರಿ ಅಧಿನಿಯಮ ಕಲಂ 11, 12 ಮತ್ತು 14ನೇ ಪ್ರಕರಣಗಳನ್ನು ಅನುಸರಿಸಿ ಕೊಡುವ ಹುಕುಂಗಳ ಮೇಲೆ ಬರುವ ಅಪೀಲುಗಳನ್ನು ಪಡೆಯುವ ಅಧಿಕಾರವನ್ನು ಕೊಡಲಾಗಿದೆ ಮತ್ತು

5. ಸದರಿ ಅಧಿನಿಯಮ 16ನೇ ಪ್ರಕರಣದ 2ನೇ ಕಲಂ ಎ ಮೇರೆಗೆ ಯಾವ ವ್ಯಕ್ತಿಗಾದರೂ ಯಾವುದಾದರೂ ಹಕ್ಕುಗಳಿದ್ದರೆ 15ನೇ ಪ್ರಕರಣದ ಮೇರೆಗೆ ಕೊಡುವ ಹುಕುಂಗಳ ಮೇಲೆ ಹುಕುಂ ಕೊಟ್ಟ ತಾರೀಖಿನಿಂದ ಮೂರು ತಿಂಗಳೊಳಗಾಗಿ ಜಿಲ್ಲಾ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಬಹುದು.

**ಅನುಸೂಚಿ**

| | |
|---|---|
| ಜಿಲ್ಲೆಯ ಹೆಸರು | : ಮಂಡ್ಯ |
| ತಾಲ್ಲೂಕಿನ ಹೆಸರು | : ಶ್ರೀರಂಗಪಟ್ಟಣ |
| ಹೋಬಳಿಯ ಹೆಸರು | : ಅರಕೆರೆ |
| ಗ್ರಾಮದ ಹೆಸರು | : ಗೆಂಡೆಹೊಸಳ್ಳಿ |
| ಕ್ಷೇತ್ರದ ಸರ್ವೆ ನಂಬರು | : 271 |
| ವಿಸ್ತೀರ್ಣ ಹೆಕ್ಟೇರುಗಳಲ್ಲಿ | 158.28 ಹೆಕ್ಟೇರ್ಸ್ |
| ಕ್ಷೇತ್ರದ ಹೆಸರು | : ಗೆಂಡೆಹೊಸಳ್ಳಿ-11 |

**ಉತ್ತರ:** ಸರ್ವೆರೇಖೆಯು ಪಶ್ಚಿಮದಿಂದ ಉತ್ತರಾಭಿಮುಖವಾಗಿ ಹೊರಟು ಸರ್ವೆಸ್ಥಳ 35 ರಿಂದ ಸರ್ವೆಸ್ಥಳ 46ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ತಲುಪುತ್ತದೆ.

| ಸರ್ವೆಸ್ಥಳ | ಕೋನ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|
| 35-36 | 341 | 15.00 |
| 36-37 | 335 | 15.00 |
| 37-38 | 348 | 20.00 |
| 38-39 | 338 | 13.00 |
| 39-40 | 332 | 10.00 |
| 40-41 | 336 | 4.00 |
| 41-42 | 344 | 4.00 |
| 42-43 | 335 | 13.00 |
| 43-44 | 328 | 4.00 |
| 44-45 | 336 | 5.00 |
| 45-46 | 29 | 10.00 |

**ಪೂರ್ವ:** ಸರ್ವೆರೇಖೆಯು ಉತ್ತರದಿಂದ ಪೂರ್ವಾಭಿಮುಖವಾಗಿ ಹೊರಟು, ಸರ್ವೆಸ್ಥಳ 46 ರಿಂದ ಸರ್ವೆಸ್ಥಳ 5ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ತಲುಪುತ್ತದೆ.

| ಸರ್ವೆಸ್ಥಳ | ಕೋನ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|
| 46-27 | 161 | 9.00 |
| 47-48 | 140 | 10.00 |
| 48-49 | 137 | 5.00 |
| 49-50 | 146 | 13.00 |
| 50-51 | 154 | 9.00 |
| 51-52 | 335 | 16.00 |
| 52-53 | 162 | 5.00 |
| 53-54 | 164 | 4.00 |
| 54-55 | 156 | 3.00 |
| 55-56 | 151 | 15.00 |

| ಸರ್ವೆಸ್ಥಳ | ಕೋನ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|
| 56-1 | 131 | 1.00 |
| 1-2 | 165 | 5.00 |
| 2-3 | 175 | 6.00 |
| 3-4 | 140 | 5.00 |
| 4-5 | 168 | 3.00 |

**ದಕ್ಷಿಣ:** ಸರ್ವೆರೇಖೆಯು ಪೂರ್ವದಿಂದ ದಕ್ಷಿಣಾಭಿಮುಖವಾಗಿ ಹೊರಟು ಸರ್ವೆಸ್ಥಳ 5 ರಿಂದ ಸರ್ವೆಸ್ಥಳ 22ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ತಲುಪುತ್ತದೆ.

| ಸರ್ವೆಸ್ಥಳ | ಕೋನ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|
| 5-6 | 150 | 10.00 |
| 6-7 | 189 | 5.00 |
| 7-8 | 155 | 8.00 |
| 8-9 | 152 | 5.00 |
| 9-10 | 148 | 12.00 |
| 10-11 | 128 | 9.00 |
| 11-12 | 137 | 8.00 |
| 12-13 | 150 | 4.00 |
| 13-14 | 172 | 4.00 |
| 14-15 | 142 | 7.00 |
| 15-16 | 175 | 6.00 |
| 16-17 | 159 | 5.00 |
| 17-18 | 190 | 3.00 |
| 18-19 | 128 | 4.00 |
| 19-20 | 156 | 3.00 |
| 20-21 | 163 | 18.00 |
| 21-22 | 189 | 10.00 |

**ಪಶ್ಚಿಮ:** ಸರ್ವೆರೇಖೆಯು ದಕ್ಷಿಣದಿಂದ ಪೂರ್ವಾಭಿಮುಖವಾಗಿ ಹೊರಟು ಸರ್ವೆಸ್ಥಳ 22 ರಿಂದ ಸರ್ವೆಸ್ಥಳ 35ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ತಲುಪುತ್ತದೆ.

| ಸರ್ವೆಸ್ಥಳ | ಕೋನ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|
| 22-23 | 264 | 1.00 |
| 23-24 | 312 | 6.00 |
| 24-25 | 328 | 6.00 |
| 25-26 | 330 | 6.00 |
| 26-27 | 316 | 6.00 |
| 27-28 | 330 | 6.00 |
| 28-29 | 312 | 6.00 |
| 29-30 | 313 | 10.00 |
| 30-31 | 330 | 17.00 |
| 31-32 | 332 | 17.00 |
| 32-33 | 335 | 10.00 |
| 33-34 | 328 | 15.00 |
| 34-35 | 338 | 10.00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ವಿ. ಜಯಲಕ್ಷ್ಮಿ**

ಪಿ.ಆರ್.1557

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**KARNATAKA POWER TRANSMISSION CORPORATION LIMITED**
**Office of the Executive Engineer Elecl., Major Works Division, KPTCL, N.R. Mohalla, Mysore-7**
**DRAFT NOTIFICATION**
**No. EEE/MWD/MYS/2005-06/3780-83, Dated: 23rd September 2005**

Karnataka Power Transmission Corporation Limited has formulated a scheme under section 28 and clause (e) of section 18 of the Electricity supply Act 1948 and the scheme is herewith published in pursuance of section 29(2) of the said Act, this notification is issued for information of the license holders and any other concerned persons. Particulars of the scheme are as hereunder:

| | |
|---|---|
| Name of the Work | Construction of Proposed 66 KV tap line from the tap point of existing 66 KV DC Tubinakere - Nagamangala line to the proposed 66/11 KV S/S at Guddenahalli Mandya District. |
| Salient Features and | To Improve Voltage condition & To meet future Load growth of Guddenahalli & its Surrounding areas. |
| Areas Passing through | Ankushapura, Mannahalli, Huraliranganahalli, Mallegowdanahalli and Guddenahalli Limits. |
| Approximate length of the line | 8.10 Km. |
| Approximate Cost | 176 Lakhs. |

KPTCL shall have and exercise all powers which the telegraph authorities possess under part-III of the Indian Telegraph Act 1985 (13 of 1985) for implementation of the above said scheme. Any objections regarding the above scheme shall be sent to the Executive Engineer Elecl., Major works Division, KPTCL, Mysore-7 within two months from the date of Publication of this Notification for KPTCL's, pursuance.

Executive Engineer Elecl., KPTCL,
PD-96 M.W. Division, Mysore.

**KARNATAKA POWER TRANSMISSION CORPORATION LIMITED**
**SUPERINTENDING ENGINEER, ELECL., TRANSMISSION (W&M) CIRCLE, KPTCL., SHIMOGA.**
**No. SEE/Tn(W&M)/EE../AEE.SSD/555, Dated: 5th May 2005**

The Karnataka Power Transmission Corporation Limited have formulate a Scheme under 28(A) of the Electricity Supply Act 1948 and the same is herewith published in pursuance of Section 29(ii) of the said Act for information of the licence and any other persons interested. Particulars of the Scheme are as follows:-

| | | |
|---|---|---|
| 1 | Name of the Scheme | Construction of 110 KV Tap line from existing Shimoga-Kemar downgraded V3 line near Bejjuvalli to proposed 110/11KV sub-station at Konandur in Thirththalli Tq. |
| 2 | Salient Features | To overcome low voltage condition and to meet growing power demand in the around Konandur village. |
| 3 | Areas Passing through | Bejjuvalli Gante Jangal, Sole Jangal, Kargal Nerale, Guddemane, Gundagadde, Guddepal Chittekere, Kanchagarani, Kottahalli, Mallikatte, Uddedevaramatta, Konandur |
| 4 | Approximate Cost | Rs.602.00 lakhs. |

The Corporation shall have and shall exercise all powers which the Telegraphs authorities posses under Part-III of the Indian Telegraph Act 1985 (18 of 1985) for carrying out the above Scheme. Objections to the above Scheme if any should be sent to the Superintending Engineer, Elecl., Transmission (Works & Maintenance) Circle, KPTCL., Haranahalli Manjappa Complex, Park Extention, Shimoga within Two months from the date of publication of the Notification for consideration of the Corporation.

Superintending Engineer, Elecl.,
PD-97 Transmission (W&M) Circle, KPTCL., Shimoga.

**ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ**
**ಅಧೀಕ್ಷಕ ಅಭಿಯಂತರವರ ಕಛೇರಿ, ಕೃ.ಭಾ.ಜ.ನಿ.(ನಿ) ಅಣೆಕಟ್ಟು ವೃತ್ತ, ಆಲಮಟ್ಟಿ**
**ಅಧಿಸೂಚನೆ**
**ಸಂಖ್ಯೆ: ಕೃ.ಭಾ.ಜ.ನಿ.ನಿ/ಆವೃ.ಆ./ಯೋಶಾ-5/2004-05/2389, ದಿನಾಂಕ: 27ನೇ ಡಿಸೆಂಬರ್ 2004**

ಕೃಷ್ಣಾ ಮೇಲ್ದಂಡೆ ಯೋಜನೆಯ ಆಲಮಟ್ಟಿ ಎಡದಂಡೆ ಕಾಲುವೆ, ವಿತರಣಾ ಕಾಲುವೆ 1 ರಿಂದ 9, 10(ಎ), 10(ಬಿ) 11(ಎ), 11(ಬಿ), 11(ಸಿ), 12 ರಿಂದ 15, 16(ಎ), 18, 19, 21, 22, 23, 24ಎ, 24ಬ, 25ಬ, 26ಎ, 26ಬ, 27ಎ, 27 ಹಾಗೂ ಆಲಮಟ್ಟಿ ಬಲದಂಡೆ ಕಾಲುವೆ

ವಿತರಣಾ ಕಾಲುವೆ 1, 2, 3ಎ, 4, 5, 6 ಮತ್ತು 8 ಗಳಡಿಯಲ್ಲಿ ನೀರಾವರಿಗೆ ಅಧಿಸೂಚಿಸುವ ಒಟ್ಟು ಕ್ಷೇತ್ರ 13949.20 ಹೆಕ್ಟೇರ್ ಇದ್ದು ಅದನ್ನು ನೀರಾವರಿ ಸಲಾಹಮೀತಿಯ ಸಭೆ ದಿನಾಂಕ: 06.12.2004 ರಂದು ಚರ್ಚಿಸಲಾಗಿದ್ದು, ಸಭೆಯ ನಡವಳಿಗಳ ಪತ್ರ ಸಂಖ್ಯೆ: ಕೃ.ಭಾ.ಜ.ನಿ.ನಿ/ಜೆ.ಬಿ.ಸಿ. ವೃತ್ತ/ಪಿಬಿ-2/ನೀ.ಸ.ಸ/2004-05/3844 ದಿನಾಂಕ: 14.12.2004 ರಲ್ಲಿ ಘೋಷಿಸಲಾಗಿದೆ.

ಕೃಷ್ಣಾ ಮೇಲ್ದಂಡೆ ಯೋಜನೆಯ 2004-05ನೇ ಸಾಲಿನ ಹಿಂಗಾರು ಹಂಗಾಮಿಗೆ ನೀರಾವರಿಯ ಕ್ಷೇತ್ರಗಳ ಸರ್ವೆ ನಂಬರುಗಳ ವಿವರಣೆಗಳು-

1) ಈ ಮೇಲಿನ ಸರ್ವೆ ನಂಬರುಗಳ ಜಮೀನುಗಳಿಗೆ 2003-2004ನೇ ಸಾಲಿನ ಹಿಂಗಾರು ಹಂಗಾಮಿನಿಂದ ನೀರಾವರಿಗಾಗಿ ನೀರು ಬಿಡಲಾಗುತ್ತಿದೆ.
2) ನೀರಿನ ಕರಾಕರಣೆ ಕಾಲಕಾಲಕ್ಕೆ ಕರ್ನಾಟಕ ಸರ್ಕಾರದ (ಕೃ.ಭಾ.ಜ.ನಿ.ನಿ.) ಹೊರಡಿಸಿರುವ ಆದೇಶದನುಸಾರ ನೀರಿನ ಕರಾಕರಣೆ ಮಾಡಲಾಗುವುದು ಹಾಗೂ ನಿಷೇಧಿತ ಬೆಳೆಗಳಾದ ಕಬ್ಬು, ಬಾಳೆ, ಭತ್ತ, ವೀಳೆದೆಲೆ, ದ್ರಾಕ್ಷಿ ಹಾಗೂ ಹೆಚ್ಚು ನೀರು ಬೇಕಾಗುವ ಬೆಳೆಗಳನ್ನು ಬೆಳೆಯದಂತೆ ನಿಷೇಧಿಸಲಾಗಿದೆ. ನಿಷೇಧಿತ ಬೆಳೆಗಳನ್ನು ಬೆಳೆದಲ್ಲಿ ಕಾನೂನಿನ ಪ್ರಕಾರ ಕ್ರಮ ಜರುಗಿಸಲಾಗುವುದು.

**ಶ್ಯಾಮರಾವ್ ಕುಲಕರ್ಣಿ**

ಸೂಪರಿಂಟೆಂಡಿಂಗ್ ಇಂಜಿನೀಯರರು, ಕೃ.ಭಾ.ಜ.ನಿ.(ನಿ) ಅಣೆಕಟ್ಟು ವೃತ್ತ, ಆಲಮಟ್ಟಿ.

## ನೀರಾವರಿ ಅಧಿಕಾರಿಗಳು ಹಾಗೂ ಅಧೀಕ್ಷಕ ಅಭಿಯಂತರರು, ಕೃಷ್ಣಾ ಭಾಗ್ಯ ಜಲನಿಗಮ ನಿಯಮಿತ, ಅಣೆಕಟ್ಟು ವೃತ್ತ, ಆಲಮಟ್ಟಿ ಇವರ ಕಛೇರಿ ಅಧಿಸೂಚನೆ

ಕರ್ನಾಟಕ ನೀರಾವರಿ ಆಕ್ಟ್ 1980ರ ನಿಯಮ 27 ರನ್ವಯ ಆಲಮಟ್ಟಿ ಎಡದಂಡೆ ಕಾಲುವೆ, ಬಲದಂಡೆ ಕಾಲುವೆ ತೂಬುಗಳ ಮೂಲಕ 2004ರ ಹಿಂಗಾರು ಹಂಗಾಮಿನ ಬೆಳೆಗಳಿಗೆ ತಪಶೀಲು:ಬ: ಮತ್ತು ಕ: ಗಳಲ್ಲಿ ನಮೂದಿಸಿದ ಕ್ಷೇತ್ರಗಳಿಗೆ ನೀರಾವರಿಗಾಗಿ ನೀರು ಬಿಡಲಾಗುವುದೆಂದು ಈ ಮೂಲಕ ಅಧಿಸೂಚಿಸಲಾಗಿದೆ.

ನೀರನ್ನು ಬಿಡುವ ವೇಳೆ, ಅವಧಿ, ನೀರನ್ನು ಪಡೆಯುವ ಕ್ಷೇತ್ರ ಬೆಳೆಯಲು ಶಿಫಾರಸ್ಸು ಮಾಡಿದ ಬೆಳೆಗಳು, ಬೆಳೆಗಳನ್ನು ಬಿತ್ತುವ ಕಾಲ ಮತ್ತು ಬೆಳೆಗಳ ಅವಧಿ ಮತ್ತು ಬೆಳೆಯಲು ನಿಷೇಧಿಸಲ್ಪಟ್ಟ ಬೆಳೆಗಳು ಈ ಕೆಳಗಿನಂತಿವೆ.

1) ಅ) ಹಿಂಗಾರು ಬೆಳೆಗಾಗಿ ದಿನಾಂಕ: 14.11.2004 ರಿಂದ 13.03.2005 ರವರೆಗೆ ನೀರಿನ ವಿತರಣೆ ಮಾಡಲಾಗುವುದು.
   ಆ) ಎರಡು ಋತು (ದೀರ್ಘಾವಧಿ) ಬೆಳೆಗಳಿಗೆ ಮುಂಗಾರು ಋತುವಿನಲ್ಲಿ ನೀರಿನ ವಿತರಣಾ ಮುಂದುವರಿಸಲಾಗುವುದು.
2) ನೀರು ಒದಗಿಸುವ ಅವಧಿ.-
   ಪ್ರತ್ಯೇಕವಾದ ಪಟ್ಟಿ ತಯಾರಿಸಿ ಕಳುಹಿಸಲಾಗುವುದು. ನೀರಾವರಿ ಅಧಿಕಾರಿಗಳು ಮಳೆಯ ಪ್ರಮಾಣ ಇತರ ಕಾರಣಗಳನ್ನು ಅನುಲಕ್ಷಿಸಿ ವೇಳ ಪಟ್ಟಿಯನ್ನು ಬದಲಾಗಿಸಬಹುದು.
3) ನೀರು ಒದಗಿಸಲಾಗುವ ಕ್ಷೇತ್ರ ತಪಶೀಲು : ಅ: ಮತ್ತು ಕ: ದಲ್ಲಿ ಒದಗಿಸಿದ ಕ್ಷೇತ್ರ.
4) ಶಿಫಾರಸ್ಸು ಮಾಡಿದ ಬೆಳೆಗಳು (ಬೆಳೆಯಬೇಕಾದ ಬೆಳೆಗಳು):- 2004-05ರ ಹಿಂಗಾರು ಹಂಗಾಮಿನಲ್ಲಿ ಈ ಬೆಳೆಗಳನ್ನು ಬೆಳೆಯಬಹುದು 1) ಹಿಂಗಾರು ಜೋಳ, 2) ಗೋಧಿ, 3) ಸೂರ್ಯಕಾಂತಿ, 4) ಕುಸಬಿ 5) ಸೇಂಗಾ 6) ಕಡಲೆ.
5) ಈ ಬೆಳೆಗಳನ್ನು ಬೆಳೆಯಲು ಕಡ್ಡಾಯವಾಗಿ ನಿಷೇಧಿಸಲ್ಪಟ್ಟಿದೆ.- ಭತ್ತ, ಕಬ್ಬು, ಬಾಳೆ, ವೀಳ್ಯದೆಲೆ ಹಾಗೂ ಹೆಚ್ಚು ನೀರು ಬೇಕಾಗುವ ಬೆಳೆಗಳು.
6) ಹಿಂಗಾರು 2005ರ ಬೆಳೆಗಳಿಗೆ ನೀರು ಒದಗಿಸುವ ತಾಲ್ಲೂಕುವಾರು, ಕ್ಷೇತ್ರದ ನಿರ್ಧಾರಿತ ತಪಶೀಲು; ಅ; ಮತ್ತು ಬ: ಗಳಲ್ಲಿಯ ನೀರಾವರಿಗೊಳಪಡುವ ಮುಂಗಾರು ಕ್ಷೇತ್ರದಲ್ಲಿ ಮತ್ತು ದೀರ್ಘಾವಧಿ ಕ್ಷೇತ್ರದಲ್ಲಿ (ಎರಡು ಋತು) ಬೆಳೆಗಳ ನಿರ್ಧಾರಿತ ಪ್ರಮಾಣ ಅನುಕ್ರಮವಾಗಿ 47.50 ಶೇಕಡಾ ಮತ್ತು 42.50 ಇರುವುದೆಂಬುದನ್ನು ಗಮನಿಸಬೇಕು. ಆದ್ದರಿಂದ ರೈತರು ಅಧಿಸೂಚಿತ ಕ್ಷೇತ್ರದ ಪ್ರತಿಶತ ಕ್ಷೇತ್ರಕ್ಕೆ ಮಾತ್ರ ನೀರನ್ನು ಪಡೆಯಬಹುದು.

**ಶ್ಯಾಮರಾವ್ ಕುಲಕರ್ಣಿ**

ಸೂಪರಿಂಟೆಂಡಿಂಗ್ ಇಂಜಿನೀಯರರು, ಕೃ.ಭಾ.ಜ.ನಿ.(ನಿ) ಅಣೆಕಟ್ಟು ವೃತ್ತ, ಆಲಮಟ್ಟಿ.

### ನಮೂನೆ

2004-2005ನೇ ಸಾಲಿನಲ್ಲಿ ಗ್ರಾಮವಾರು ನೀರಾವರಿಗೊಳಪಡುವ ಕ್ಷೇತ್ರದ ವಿವರ.

| ಕ್ರಮ ಸಂಖ್ಯೆ | ಜಿಲ್ಲಾ | ತಾಲ್ಲೂಕು | ಗ್ರಾಮ | ಹೊಸದಾಗಿ ಅಧಿಸೂಚನೆಗೊಳಿಸಬೇಕಾದ ಕ್ಷೇತ್ರ (ಹೆಕ್ಟೇರ್‌ಗಳಲ್ಲಿ) | ಷರಾ |
|---|---|---|---|---|---|
| 1 | 2 | 3 | 4 | 5 | 6 |
| **1)** | **ಆಲಮಟ್ಟಿ ಎಡದಂಡೆ ಕಾಲುವೆ** | | | | |
| | ಜಿಲ್ಲಾ: ವಿಜಾಪೂರ | ತಾಲ್ಲೂಕು: ಬ.ಬಾಗೇವಾಡಿ | ನಿಡಗುಂದಿ | 12.45 | |
| | | ತಾಲ್ಲೂಕು: ಮುದ್ದೇಬಿಹಾಳ | ವಡವಡಗಿ | 91.96 | |
| | | | ಮುದ್ದಾಪುರ | 55.49 | |
| | | | ಹುಲ್ಲೂರ | 126.48 | |
| | | | ಕಾಳಗಿ | 189.66 | |
| | | | ಬಳಬಟ್ಟಿ | 60.87 | |
| | | | ಕಂದಗನೂರ | 163.67 | |

| 1 | 2 | 3 | 4 | 5 | 6 |
|---|---|---|---|---|---|
| | | | ಕೊಪ್ಪ<br>ಹಡಲಗೇರಿ<br>ಕೋಳೂರ | 35.68<br>24.94<br>79.36 | |
| | | | ಹಡಗಲಿ | 78.35 | |
| | | | ಬೈಲಕೂರ | 52.69 | |
| | | | ಯರಗಲ್ | 166.97 | |
| | | | ಆಲೂರ | 303.38 | |
| | | | **ಒಟ್ಟು** | **1441.95** | |
| **2)** | **ಆಲಮಟ್ಟಿ ಬಲದಂಡೆ ಕಾಲುವೆ** | | | | |
| | ಜಿಲ್ಲಾ: ಬಾಗಲಕೋಟೆ | ತಾಲ್ಲೂಕು: ಬಾಗಲಕೋಟೆ | ತಿಮ್ಮಾಪೂರ | 28.64 | |
| | | | ಮನಹಳ್ಳಿ | 80.22 | |
| | | | ನಾಗಸಂಪಗಿ | 38.32 | |
| | | | ಹೊಸೂರ | 22.79 | |
| | | | ನಾಗರಾಳ | 45.10 | |
| | | | **ಒಟ್ಟು** | **215.07** | |
| | | | **ನೀರಾವರಿಗೊಳಪಡುವ ಒಟ್ಟು ಕ್ಷೇತ್ರ** | **1657.02** | |

ಸೂಪರಿಂಟೆಡಿಂಗ್ ಇಂಜಿನೀಯರರು,
ಕೃ.ಭಾ.ಜ.ನಿ.(ನಿ) ಅಣೆಕಟ್ಟು ವೃತ್ತ, ಆಲಮಟ್ಟಿ.

**ತಪಶೀಲು (ಅ)**

| ಕ್ರ. ಸಂ. | ವಿತರಣಾ ಕಾಲುವೆ ಹೆಸರು | ತಾಲ್ಲೂಕು/ ಜಿಲ್ಲಾ | 2002-2003ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೆ.ಗಳಲ್ಲಿ | 2003-2004ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೆ.ಗಳಲ್ಲಿ | 2003-2004ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೆ.ಗಳಲ್ಲಿ | 2004-2005ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೆ.ಗಳಲ್ಲಿ | 2004-2005ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚನೆ ಗೊಳಿಸಲು ಪ್ರಸ್ತಾಪಿತ ಕ್ಷೇತ್ರ ಹೆ.ಗಳಲ್ಲಿ | 2004-2005ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿಸಲು ಪ್ರಸ್ತಾಪಿಸಿರುವ ಕ್ಷೇತ್ರ ಹೆ.ಗಳಲ್ಲಿ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | ಆಲಮಟ್ಟಿ ಎಡದಂಡೆ ಕಾಲುವೆ ವಿತರಣ ಕಾಲುವೆ ಸಂಖ್ಯೆ 1 ರಿಂದ 27ರ ವರೆಗೆ | ತಾ: ಬ.ಬಾಗೇವಾಡಿ ತಾ: ಮುದ್ದೇಬಿಹಾಳ ಜಿಲ್ಲಾ: ಬಿಜಾಪುರ | 1909.81 | 3808.64 | 1725.04 | 3780.58 | 1441.95 | 12666.03 |
| 2 | ಆಲಮಟ್ಟಿ ಬಲದಂಡೆ ಕಾಲುವೆ ವಿತರಣ ಕಾಲುವೆ ಸಂಖ್ಯೆ 1 ರಿಂದ 08ರ ವರೆಗೆ | ತಾ: ಬಾಗಲಕೋಟೆ ಜಿಲ್ಲಾ: ಬಾಗಲಕೋಟೆ | 0 | 0 | 721.92 | 346.18 | 215.07 | 1283.17 |
| | | **ಒಟ್ಟು** | **1909.81** | **3808.64** | **2448.96** | **4126.74** | **1857.02** | **13949.20** |

ಸೂಪರಿಂಟೆಡಿಂಗ್ ಇಂಜಿನೀಯರರು,
ಕೃ.ಭಾ.ಜ.ನಿ.(ನಿ) ಅಣೆಕಟ್ಟು ವೃತ್ತ, ಆಲಮಟ್ಟಿ.

**ತಪಶೀಲು (ಬ)**

**2004-2005ನೇ ಸಾಲಿನ ಹಿಂಗಾರು ಹಂಗಾಮಿಗೆ ಆಲಮಟ್ಟಿ ಎಡದಂಡೆ ಮತ್ತು ಆಲಮಟ್ಟಿ ಬಲದಂಡೆ ಕಾಲುವೆಗೆ ಸಂಬಂಧಿಸದ ವಿತರಣಾ ಕಾಲುವೆಗಳ ಅಡಿಯಲ್ಲಿ ಅಧಿಸೂಚಿಸಲು ಪ್ರಸ್ತಾಪಿಸಿರುವ ಕ್ಷೇತ್ರ.**

| ಕ್ರ. ಸಂ. | ವಿತರಣಾ ಕಾಲುವೆ ಹೆಸರು | 2002-2003ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೆ.ಗಳಲ್ಲಿ | 2003-2004ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೆ.ಗಳಲ್ಲಿ | 2003-2004ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೆ.ಗಳಲ್ಲಿ | 2004-2005ನೇ ಸಾಲಿನ ಮುಂಗಾರು ಹಂಗಾಮಿಗೆ ಅಧಿಸೂಚಿತ ಕ್ಷೇತ್ರ ಹೆ.ಗಳಲ್ಲಿ | 2004-2005ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚನೆ ಗೊಳಿಸಲು ಪ್ರಸ್ತಾಪಿತ ಕ್ಷೇತ್ರ ಹೆ.ಗಳಲ್ಲಿ | 2004-2005ನೇ ಸಾಲಿನ ಹಿಂಗಾರು ಹಂಗಾಮಿಗೆ ಅಧಿಸೂಚಿಸಲು ಪ್ರಸ್ತಾಪಿಸಿರುವ ಕ್ಷೇತ್ರ ಹೆ.ಗಳಲ್ಲಿ |
|---|---|---|---|---|---|---|---|
| 1 | 2 | 4 | 5 | 6 | 7 | 8 | 9 |
| | **ಆಲಮಟ್ಟಿ ಎಡದಂಡೆ ಕಾಲುವೆ** | | | | | | |
| | ವಿತರಣಾ ಕಾಲುವೆ-1 | 925.17 | 280.16 | | 8.15 | 11.44 | 1224.92 |
| | ವಿತರಣಾ ಕಾಲುವೆ-2 | 984.64 | 347.25 | 170.37 | | 7.28 | 1509.54 |

| 1 | 2 | 4 | 5 | 6 | 7 | 8 | 9 |
|---|---|---|---|---|---|---|---|
| | ವಿತರಣಾ ಕಾಲುವೆ-3 | | | 386.88 | 55.52 | 141.18 | 583.58 |
| | ವಿತರಣಾ ಕಾಲುವೆ-4 | | 54.18 | | | | 54.18 |
| | ವಿತರಣಾ ಕಾಲುವೆ-4ಎ | | | | | 49.66 | 49.66 |
| | ವಿತರಣಾ ಕಾಲುವೆ-5 | | | 211.39 | 347.67 | 250.53 | 809.59 |
| | ವಿತರಣಾ ಕಾಲುವೆ-6 | | 245.18 | | 252.50 | | 497.68 |
| | ವಿತರಣಾ ಕಾಲುವೆ-7 | | 63.83 | | 17.40 | | 81.23 |
| | ವಿತರಣಾ ಕಾಲುವೆ-8 | | 179.74 | 34.14 | | | 213.88 |
| | ವಿತರಣಾ ಕಾಲುವೆ-9 | | 840.25 | | | 163.67 | 1003.92 |
| | ವಿತರಣಾ ಕಾಲುವೆ-10(ಎ) | | 52.54 | | | | 52.54 |
| | ವಿತರಣಾ ಕಾಲುವೆ-10(ಬಿ) | | 232.42 | | | | 232.42 |
| | ವಿತರಣಾ ಕಾಲುವೆ-11(ಎ) | | 50.98 | | | | 50.98 |
| | ವಿತರಣಾ ಕಾಲುವೆ-11(ಬಿ) | | 49.58 | | | | 49.58 |
| | ವಿತರಣಾ ಕಾಲುವೆ-11(ಸಿ) | | 105.54 | | | | 105.54 |
| | ವಿತರಣಾ ಕಾಲುವೆ-12 | | 1007.17 | | | | 1007.17 |
| | ವಿತರಣಾ ಕಾಲುವೆ-13 | | | 379.65 | 36.69 | 24.94 | 441.28 |
| | ವಿತರಣಾ ಕಾಲುವೆ-14 | | 299.85 | | | | 299.85 |
| | ವಿತರಣಾ ಕಾಲುವೆ-15 | | | 224.39 | | | 224.39 |
| | ವಿತರಣಾ ಕಾಲುವೆ-16(ಎ) | | | 96.86 | 858.56 | 210.40 | 1165.82 |
| | ವಿತರಣಾ ಕಾಲುವೆ-16(ಬಿ) | | | 221.36 | | | 221.36 |
| | ವಿತರಣಾ ಕಾಲುವೆ-17(ಎ) | | | | 99.35 | | 99.35 |
| | ವಿತರಣಾ ಕಾಲುವೆ-17(ಬಿ) | | | | 206.16 | | 206.16 |
| | ವಿತರಣಾ ಕಾಲುವೆ-18 | | | | 243.49 | 166.97 | 410.46 |
| | ವಿತರಣಾ ಕಾಲುವೆ-19 | | | | | 187.42 | 187.42 |
| | ವಿತರಣಾ ಕಾಲುವೆ-21 | | | | | 115.96 | 115.96 |
| | ವಿತರಣಾ ಕಾಲುವೆ-22 | | | | 488.19 | | 488.19 |
| | ವಿತರಣಾ ಕಾಲುವೆ-23 | | | | 56.20 | | 56.20 |
| | ವಿತರಣಾ ಕಾಲುವೆ-24(ಎ) | | | | 38.78 | | 38.78 |
| | ವಿತರಣಾ ಕಾಲುವೆ-24(ಬಿ) | | | | 299.93 | | 299.93 |
| | ವಿತರಣಾ ಕಾಲುವೆ-25(ಬಿ) | | | | 54.05 | | 54.05 |
| | ವಿತರಣಾ ಕಾಲುವೆ-26(ಎ) | | | | 89.94 | | 89.94 |
| | ವಿತರಣಾ ಕಾಲುವೆ-26(ಬಿ) | | | | 401.08 | | 401.08 |
| | ವಿತರಣಾ ಕಾಲುವೆ-27(ಎ) | | | | 69.27 | | 69.27 |
| | ವಿತರಣಾ ಕಾಲುವೆ-27 | | | | 157.63 | | 157.63 |
| | ಹೆ.ವಿತರಣಾ ಕಾಲುವೆ-ಸರಪಳಿ 12.60 ಕಿ.ಮೀ. | | | | | 112.50 | 112.50 |
| | **ಒಟ್ಟು ಕ್ಷೇತ್ರ (1)** | **1909.81** | **3808.67** | **1725.04** | **3780.56** | **1441.95** | **12666.03** |
| | **ಆಲಮಟ್ಟಿ ಬಲದಂಡೆ ಕಾಲುವೆ** | | | | | | |
| | ವಿತರಣಾ ಕಾಲುವೆ-1 | | | 127.49 | | | 127.49 |
| | ವಿತರಣಾ ಕಾಲುವೆ-2 | | | 129.07 | | | 129.07 |
| | ವಿತರಣಾ ಕಾಲುವೆ-3ಎ | | | 96.06 | | | 96.06 |
| | ವಿತರಣಾ ಕಾಲುವೆ-3ಬಿ | | | | 39.52 | 28.64 | 68.16 |
| | ವಿತರಣಾ ಕಾಲುವೆ-4 | | | | 90.70 | 80.22 | 170.92 |
| | ವಿತರಣಾ ಕಾಲುವೆ-5 | | | 158.44 | | 38.32 | 196.76 |
| | ವಿತರಣಾ ಕಾಲುವೆ-6 | | | | 57.12 | 67.89 | 125.01 |
| | ವಿತರಣಾ ಕಾಲುವೆ-7 | | | | 89.68 | | 89.68 |
| | ವಿತರಣಾ ಕಾಲುವೆ-8 | | | 210.86 | 69.16 | | 280.02 |
| | **ಒಟ್ಟು ಕ್ಷೇತ್ರ (2)** | | | **721.92** | **346.18** | **215.07** | **1283.17** |
| | **ಒಟ್ಟು ಕ್ಷೇತ್ರ (1+2)** | **1909.81** | **3808.67** | **2446.96** | **4126.74** | **1657.02** | **13949.20** |

**ಶ್ಯಾಮರಾವ್ ಕುಲಕರ್ಣಿ**

ಪಿ.ಡಿ.99 ಸೂಪರಿಂಟೆಂಡಿಂಗ್ ಇಂಜಿನೀಯರರು, ಕೃ.ಭಾ.ಜ.ನಿ.(ನಿ) ಅಣೆಕಟ್ಟು ವೃತ್ತ, ಆಲಮಟ್ಟಿ.

**SOCIAL WELFARE DEPARTMENT**

**NOTIFICATION No. SWD 227 SAD 2003, Bangalore, Dated: 24th September 2005**

From time to time representations have been made to the State Government that disproportionate majority of the benefits given by the Government to Scheduled Castes have gone to certain castes, races or tribes of Scheduled Castes in the State of Karnataka, and that those benefits should be evenly shared by all the castes, races or tribes of the Scheduled Castes.

The Supreme Court in the case of E V.CHINNAIAH v. STATE OF ANDHRA PRADESH (AIR 2005 S C 162) while considering the validity of a law by which Scheduled Castes were reclassified into four groups and the reservation already made was apportioned between them, has observed as follows:

> "If benefits of reservation are not percolating equitably, measures should be taken to see that they give such adequate or additional training so as to enable them to compete with other"

> "The very fact that the members of the Scheduled Castes are most backward amongst the backward classes and the impugned legislation having already proceeded on the basis that they are not adequately represented both in terms of clause (4) of Article 15 and clause (4) of Article 16 of the Constitution of India, a further classification by way of micro classification is not permissible. Such classification of the members of different classes of people based on their respective castes would also be violative of the doctrine of reasonableness. Article 341 provides that exclusion even of a part or a group of castes from the Presidential List can be done only by the Parliament. The logical corollary thereof would be that the State Legislatures are forbidden from doing that"

Hon' ble Justice Sinha, who concurred with the other Judges posed the problem under the heading **"What is the remedy?"** In para 123 he has analyzed the problem and has observed thus-

> "There is one practical aspect of the matter which may not also be lost sight of. The chart produced before us clearly shows that the members belonging to Relli and Adi-Andhra are hardly educated. What was necessary in the situation was to provide to them scholarships, hostel facilities, special coaching, etc., so that they may be brought on the same platform with the members of other Scheduled Tribes, viz. Madiga and Mala, if not with the other backward classes. It is not disputed that members belonging to Relli are hardly educated. Only 2% of the members of the said community have studied in secondary schools. No one has ever been admitted in any engineering discipline or other professional disciplines. The said facts clearly go to show that providing reservation for them in engineering or medical discipline or in public service would not solve their problem. Without such basic education, the members belonging to the said community would not be getting admission either in the engineering or medical colleges or other professional courses and as such the question of their joining public service may not arise at all. Now, even for the post of Class IV employees, qualification of passing matriculation examination is provided. Unless children of the said community are educated, the provision both for education as also public service would be a myth for them and ultimately in view of the impugned legislation for all intent and purport, the benefit thereof would go to other categories. The State, in our opinion, should take positive steps in this behalf."

Article 341(2) of the Constitution of India empowers the Parliament to exclude any part of or group within any castes, races or tribes of Scheduled Castes notified by the President under article 341(1) of the Constitution.

Having regard to the representations made before the State Government, the observations of the Hon'ble Supreme Court quoted above, and the provisions of article 341 (2) of the Constitution, the Government of Karnataka is of opinion that it is necessary to appoint a Commission of Inquiry in this regard, which is matter of public importance.

Now, therefore, in exercise of the powers conferred by Section 3 of the Commissions of Inquiry Act, 1952 (Central Act 60 of 1952), the Government of Karnataka hereby appoints a Commission of Inquiry consisting of Hon' ble Mr. Justice A.J.Sadashiva (Retd) to identify the particular castes, races and tribes of Scheduled Castes in the State of Karnataka to whom the benefits of reservation are not percolating equitably and to suggest within a period of twelve months what are all the measures and positive steps that should be taken so as to enable them to compete with other categories of the Scheduled Castes in the State and other relevant aspects.

The terms of reference of the Commission shall be as follows:

1) Examine and report whether the benefits of reservation extended by the Government to the Scheduled Castes under Articles 15 and 16 of the Constitution have been enjoyed by all castes, races and tribes of Scheduled Castes equitably.

2) If not,

(i) Reasons (educational, economical or others) for the same;

(ii) The extent to which different castes, races and tribes of scheduled castes have enjoyed those benefits;

(iii) Steps that may be taken to ensure that the benefits are equitably distributed among the different castes, races and tribes of scheduled castes;

(iv) Any other matter, relevant or incidental to or arising out of the matter referred to above.

By order and in the name of the Governor of Karnataka,

**M. PRANADEVA**

P.R. 1732 Deputy Secretary to government, Social Welfare Department.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಕುಕ 5 ಎಂಎಂಸಿ 2005, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2005**

೧) ತಾ: 01.09.2005 ಸಂಖ್ಯೆ: ಆಕುಕ 41 ಎಂಎಂಸಿ 2005 ರ ಸರ್ಕಾರಿ ಆದೇಶದ ಅನುಸಾರ ಬೆಂಗಳೂರು ವೈದ್ಯಕೀಯ ಕಾಲೇಜಿನ ಹಾಗೂ ಮೈಸೂರು ವೈದ್ಯಕೀಯ ಕಾಲೇಜಿನ ಈ ಕೆಳಕಂಡ ನಿವೃತ್ತ ಪ್ರಾಧ್ಯಾಪಕರುಗಳನ್ನು 1977 ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ 15(1)(ಬಿ)(ii) ನೇ ನಿಯಮದಡಿ ಗುತ್ತಿಗೆ ಆಧಾರದ ಮೇಲೆ ಅವರ ಹೆಸರುಗಳ ಮುಂದೆ ಸೂಚಿಸಿರುವ ಹುದ್ದೆಗಳಲ್ಲಿ ಮತ್ತು ದಿನಾಂಕದಿಂದ ಜಾರಿಗೆ ಬರುವಂತೆ 2 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಲಾಗಿದೆ.

೨) ಮೇಲ್ಕಂಡ ಗುತ್ತಿಗೆ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡ ಸರ್ಕಾರಿ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

| ಕ್ರ. ಸಂ. | ನಿವೃತ್ತಿದಾರರ ಹೆಸರು ಮತ್ತು ಹಿಂದೆ ಹೊಂದಿದ್ದ ಹುದ್ದೆಯ ಪದನಾಮ | ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವ ಹುದ್ದೆಯ ಪದನಾಮ ಮತ್ತು ವೈದ್ಯಕೀಯ ಕಾಲೇಜು | ಯಾವ ದಿನಾಂಕದಿಂದ |
|---|---|---|---|
| 1 | 2 | 3 | 4 |
| 1) | ಡಾ: ಹೆಚ್‌ಎಸ್. ಸುರೇಶ್, ನ್ಯೂರಾಲಜಿ ನಿವೃತ್ತ, ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು, ಬೆಂಗಳೂರು | ನ್ಯೂರಾಲಜಿ ಸಹಾಯಕ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು | ತಕ್ಷಣದಿಂದ ಜಾರಿಗೆ ಬರುವಂತೆ |
| 2) | ಡಾ: ವಿ.ವಿ. ಪವಾರ್ ನಿವೃತ್ತ ENT ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು | ENT ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು | ತತ್‌ಕ್ಷಣದಿಂದ ಜಾರಿಗೆ ಬರುವಂತೆ |
| 3) | ಡಾ: ಮೀರಾ ಡಿ ಮೇವುಂಡಿ ನಿವೃತ್ತ ಮೈಕ್ರೋಬಯಾಲಜಿ ಪ್ರಾಧ್ಯಾಪಕರು, ಮತ್ತು ಪ್ರಾಂಶುಪಾಲರು ,ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು | ಮೈಕ್ರೋ ಬಯಾಲಜಿ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು | ತತ್‌ಕ್ಷಣದಿಂದ ಜಾರಿಗೆ ಬರುವಂತೆ |
| 4) | ಡಾ: ಹೆಚ್. ವೆಂಕಟರಾಮಯ್ಯ ನಿವೃತ್ತ ಕಾರ್ಡಿಯಾಲಜಿ ಪ್ರಾಧ್ಯಾಪಕರು, ನಿಯೋಜನೆ ಮೇಲೆ ಶ್ರೀ ಜಯದೇವ ಹೃದ್ರೋಗ ಸಂಸ್ಥೆ ಬೆಂಗಳೂರು | ಕಾರ್ಡಿಯಾಲಜಿ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು ಬೆಂಗಳೂರು | ತತ್‌ಕ್ಷಣದಿಂದ ಜಾರಿಗೆ ಬರುವಂತೆ |
| 5) | ಡಾ: ಮುನೀರ್ ಅಹಮ್ಮದ್ ನಿವೃತ್ತ ರೇಡಿಯೋಲಜಿ ಪ್ರಾಧ್ಯಾಪಕರು ಮೈಸೂರು ವೈದ್ಯಕೀಯ ಕಾಲೇಜು | ರೇಡಿಯಾಲಜಿ ಪ್ರಾಧ್ಯಾಪಕರು ಮೈಸೂರು ವೈದ್ಯಕೀಯ ಕಾಲೇಜು | 02.11.2005 ರಿಂದ ಜಾರಿಗೆ ಬರುವಂತೆ |
| 6) | ಡಾ: ಎಸ್.ಆರ್. ಮಾಹಿ ಮಂಜನ್ ಸಿಂಗ್, ನಿವೃತ್ತ ಶಸ್ತ್ರಚಿಕಿತ್ಸಾಶಾಸ್ತ್ರ ಪ್ರಾಧ್ಯಾಪಕರು ಮತ್ತು ವೈದ್ಯಕೀಯ ಅಧೀಕ್ಷಕರು, ಕೆ.ಆರ್. ಆಸ್ಪತ್ರೆ, ಮೈಸೂರು ವೈದ್ಯಕೀಯ ಕಾಲೇಜು | ಶಸ್ತ್ರ ಚಿಕಿತ್ಸಾ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು ಮೈಸೂರು | ತತ್‌ಕ್ಷಣದಿಂದ ಜಾರಿಗೆ ಬರುವಂತೆ |
| 7) | ಡಾ: ಕೆ.ಎಸ್. ಸಿದ್ದರಾಜು ನಿವೃತ್ತ ವೈದ್ಯಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು | ವೈದ್ಯಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು(ಅವರ ವಿರುದ್ಧ ಬಾಕಿ ಇರುವ ನ್ಯಾಯಾಂಗ ವಿಚಾರಣೆಯ ಫಲಿತಾಂಶಕ್ಕೆ ಒಳಪಟ್ಟು) | ತತ್‌ಕ್ಷಣದಿಂದ ಜಾರಿಗೆ ಬರುವಂತೆ |

| ಕ್ರ. ಸಂ. | ನಿವೃತ್ತಿದಾರರ ಹೆಸರು ಮತ್ತು ಹಿಂದೆ ಹೊಂದಿದ್ದ ಹುದ್ದೆಯ ಪದನಾಮ | ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವ ಹುದ್ದೆಯ ಪದನಾಮ ಮತ್ತು ವೈದ್ಯಕೀಯ ಕಾಲೇಜು | ಯಾವ ದಿನಾಂಕದಿಂದ |
|---|---|---|---|
| 8) | ಡಾಃ ಬಿ.ಶಶಿಧರನ್, ನಿವೃತ್ತ ವೈದ್ಯಶಾಸ್ತ್ರ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು | ವೈದ್ಯಶಾಸ್ತ್ರ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು | ತತ್‌ಕ್ಷಣದಿಂದ ಜಾರಿಗೆ ಬರುವಂತೆ |
| 9) | ಡಾಃ ಎಂ.ಎಸ್ ಧನಂಜಯ, ನಿವೃತ್ತ OBG ಪ್ರಾಧ್ಯಾಪಕರು ಹಾಗೂ ವೈದ್ಯಕೀಯ ಅಧೀಕ್ಷಕರು, ವಾಣಿವಿಲಾಸ ಆಸ್ಪತ್ರೆ ಪ್ರಾಂಶುಪಾಲರು ಹಾಗೂ ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ | OBG ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಪ್ರಾಂಶುಪಾಲರು ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ | 02.10 .2005 ರಿಂದ ಜಾರಿಗೆ ಬರುವಂತೆ |
| 10) | ಡಾಃ ಗುರುಮೂರ್ತಿ, ನಿವೃತ್ತ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು ಹಾಗೂ ಪ್ರಾಂಶುಪಾಲರು, ಬೆಳಗಾಂ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ | ಪ್ಲಾಸ್ಟಿಕ್ ಸರ್ಜರಿ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯು ಕಾಲೇಜು ಹಾಗೂ ಪ್ರಾಂಶುಪಾಲರು, ಬೆಳಗಾಂ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ | 02.10.2005 ರಿಂದ ಜಾರಿಗೆ ಬರುವಂತೆ |
| 11) | ಡಾಃ ಹೆಚ್.ಬಿ. ವೀರಣ್ಣ, ನಿವೃತ್ತ ಫಿಜಿಯಾಲಜಿ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು | ಫಿಜಿಯಾಲಜಿ ಪ್ರಾಧ್ಯಾಪಕರು ಬೆಂಗಳೂರು ವೈದ್ಯಕೀಯ ಕಾಲೇಜು | 02.11.2005 ರಿಂದ ಜಾರಿಗೆ ಬರುವಂತೆ |
| 12) | ಡಾಃಎಸ್. ಗೌರಿಕುಮಾರಿ, ಅರವಳಿಕೆಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು | ಅರವಳಿಕೆಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು | 02.11.2005 ರಿಂದ ಜಾರಿಗೆ ಬರುವಂತೆ |
| 13) | ಡಾಃ ಎಂ. ಸುಧಾರಾವ್, ರೋಗಲಕ್ಷಣಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು | ರೋಗಲಕ್ಷಣಶಾಸ್ತ್ರ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು | 02.01.2006 ರಿಂದ ಜಾರಿಗೆ ಬರುವಂತೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1781

ಎಸ್. ನಾಗರಾಜು

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

**KARNATAKA POWER TRANSMISSION CORPORATION LIMITED**

**Office of the Executive Engineer Elecl., Major Works Division, KPTCL, N.R. Mohalla, Mysore-7**

**DRAFT NOTIFICATION**

**No. EEE/MWD/MY8/2005-06/3775-79, Dated: 23rd September 2005**

Karnataka Power Transmission Corporation Limited has formulated a scheme under section 28 and clause (e) of section 18 of the Electricity supply Act 1948 and the scheme is herewith published in pursuance of section 29(2) of the said Act, this notification is issued for information of the license holders and any other concerned persons. Particulars of the scheme are as hereunder:

| | |
|---|---|
| Name of the Work | Construction of Proposed 66 KV line from the proposed MHS of M/s. SLS Power Industries Ltd., to the existing 66/11 KV S/S at Sathegala in Kollegala Taluk. |
| Salient Features and | For evacuation of 6.25 MW Power, Improvement of Voltage and meet future load growth in and around Sathegala & Kollegala Taluk. |
| Areas Passing through | Sathegala Limits. |
| Approximate length of the line | 1.09 Km. |
| Approximate Cost | 22.00 Lakhs. |

KPTCL shall have and exercise all powers which the telegraph authorities posses under part-III of the Indian Telegraph Act 1985 (13 of 1985) for implementation of the above said scheme. Any objections regarding the above scheme shall be sent to the Executive Engineer Elecl., Major works Division, KPTCL, Mysore-7 within two months from the date of Publication of this Notification for KPTCL's, pursuance.

Executive Engineer Elecl., KPTCL,

PD-93

M.W. Division, Mysore.

## ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ನಡವಳಿಗಳು

**ವಿಷಯ :** ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕರು, ಕೇಂದ್ರ ಕಛೇರಿ, ಬೆಂಗಳೂರು ಇವರ ವಿರುದ್ಧ ಶಿಸ್ತು ಕ್ರಮದ ಕುರಿತು.

**ಉಲ್ಲೇಖ :**
1) ಈ ಕಛೇರಿಯ ತಿಳುವಳಿಕೆ ಪತ್ರದ ಸಂಖ್ಯೆ: ಸಿ3-ಶಿಸ್ತು-ಲಿಪಿಕ-01:2004-05, ದಿನಾಂಕ: 16.06.2004.
2) ಆದೇಶ ಸಂಖ್ಯೆ: ಸಿ3:ಶಿಸ್ತು:ಲಿಪಿಕ-01:04-05, ದಿನಾಂಕ: 03.08.2004.
3) ರೇಷ್ಮೆ ಉಪನಿರ್ದೇಶಕರು, ನಿರ್ದೇಶನಾಲಯ, ಬೆಂಗಳೂರು ಇವರ ಪತ್ರದ ಸಂಖ್ಯೆ: ಉನಿ.ಎಸ್‌ಪಿಎಸ್‌ಎಫ್:ಇವಿ:02:04-05, ದಿನಾಂಕ: 02.04.2005.
4) ತಿಳುವಳಿಕೆ ಪತ್ರದ ಸಂಖ್ಯೆ: ಸಿ3:ಶಿಸ್ತು:ಲಿಪಿಕ-01:04-05, ದಿನಾಂಕ: 29.04.2005.

**ಪೀಠಿಕೆ:**

ಶ್ರೀ ಕೆ. ಪ್ರಭುದೇವ್, ಪ್ರಥಮ ದರ್ಜೆ ಸಹಾಯಕ, ರೇಷ್ಮೆ ನಿರ್ದೇಶನಾಲಯ, ಬೆಂಗಳೂರು ಇವರ ಸೇವೆಯನ್ನು ದಿನಾಂಕ: 22.06.2002ರ ಆದೇಶದಲ್ಲಿ ಶ್ರೀ ಎಂ. ಚಂದ್ರಪ್ಪ, ಶಾಸಕರು, ಭರಮಸಾಗರ ಕ್ಷೇತ್ರ, ಚಿತ್ರದುರ್ಗ ಜಿಲ್ಲೆ ಇವರ ಆಪ್ತ ಕಾರ್ಯದರ್ಶಿ ಹುದ್ದೆಗೆ ನಿಯೋಜಿಸಿ ದಿನಾಂಕ: 24.06.2002 ರಂದು ರೇಷ್ಮೆ ನಿರ್ದೇಶನಾಲಯದಿಂದ ಬಿಡುಗಡೆಗೊಳಿಸಲಾಗಿತ್ತು. ಇವರು ದಿನಾಂಕ: 24.06.2002 ರಂದು ನಿರ್ದೇಶನಾಲಯದಿಂದ ಕಾರ್ಯ ವಿಮುಕ್ತಿಗೊಂಡು ದಿನಾಂಕ: 25.06.2002 ರಂದು ನಿಯೋಜಿಸಿದ ಜಾಗದಲ್ಲಿ ಕಾರ್ಯವರದಿ ಮಾಡಿಕೊಂಡಿರುತ್ತಾರೆ. ದಿನಾಂಕ: 21.07.2003 ರಂದು ಶ್ರೀ ಎಂ. ಚಂದ್ರಪ್ಪ, ಶಾಸಕರು, ಭರಮಸಾಗರ, ಚಿತ್ರದುರ್ಗ ಜಿಲ್ಲೆ ಇವರು ಸರ್ಕಾರಕ್ಕೆ ವರದಿ ಸಲ್ಲಿಸಿ, ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕ ಇವರು ಜನವರಿ 2003 ರಿಂದ ಗೈರು ಹಾಜರಿಯಾಗಿರುವುದರಿಂದ ಇವರ ಸೇವೆಯನ್ನು ವಾಪಸ್ಸು ಪಡೆಯಲು ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರು ದಿನಾಂಕ: 07.10.2003ರ ಆದೇಶದಲ್ಲಿ ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕ ಇವರನ್ನು ಆಪ್ತ ಸಹಾಯಕರ ಹುದ್ದೆಯಿಂದ ಬಿಡುಗಡೆಗೊಳಿಸಿ ರೇಷ್ಮೆ ಇಲಾಖೆಗೆ ವಾಪಸ್ಸು ನೀಡಿರುತ್ತಾರೆ. ಆದರೆ ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕ ಇವರು ರೇಷ್ಮೆ ನಿರ್ದೇಶನಾಲಯದಲ್ಲಿ ಕಾರ್ಯವರದಿ ಮಾಡಿಕೊಳ್ಳದೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ. ಶ್ರೀ ಕೆ. ಪ್ರಭುದೇವ ರವರಿಗೆ ಕೆಲಸಕ್ಕೆ ಹಾಜರಾಗುವಂತೆ ನಿರ್ದೇಶನಾಲಯದಿಂದ ದಿನಾಂಕ: 06.03.2004, 05.04.2004 ರಂದು ಜ್ಞಾಪನವನ್ನು ಇವರ ನಿವಾಸದ ವಿಳಾಸಕ್ಕೆ ರವಾನಿಸಿದ್ದರೂ ಶ್ರೀ ಕೆ. ಪ್ರಭುದೇವ ರವರು ಯಾವುದೇ ಪ್ರತಿಕ್ರಿಯೆ ವ್ಯಕ್ತಪಡಿಸಿರುವುದಿಲ್ಲ. ಶ್ರೀ ಕೆ. ಪ್ರಭುದೇವರವರು ಅನಧಿಕೃತವಾಗಿ ಗೈರು ಹಾಜರಿಯಲ್ಲಿಯೇ ಮುಂದುವರಿಯುತ್ತಿದ್ದುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಸಿ.ಸಿ.ಎ. ನಿಯಮ 11 ರಡಿಯಲ್ಲಿ ದಿನಾಂಕ: 16.06.2004 ರಂದು ಆರೋಪ ಪಟ್ಟಿಯನ್ನು ತಿಳುವಳಿಕೆ ಪತ್ರದೊಂದಿಗೆ ಜಾರಿಗೊಳಿಸಲಾಯಿತು. ಈ ತಿಳುವಳಿಕೆ ಪತ್ರಕ್ಕೆ ಇವರು ಯಾವುದೇ ರೀತಿಯ ಹೇಳಿಕೆ ನೀಡದೆ ಅನಧಿಕೃತ ಗೈರು ಹಾಜರಿಯನ್ನು ಮುಂದುವರಿಸಿಕೊಂಡು ಹೋಗಿರುತ್ತಾರೆ. ಇದರಿಂದ ಆರೋಪದ ಸತ್ಯಾಸತ್ಯತೆಯನ್ನು ಕಂಡು ಹಿಡಿಯಲು ವಿಚಾರಣೆ ನಡೆಸುವುದು ಅನಿವಾರ್ಯವಾದ್ದರಿಂದ ದಿನಾಂಕ: 03.08.2004 ಆದೇಶದಲ್ಲಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸಿ ವಿಚಾರಣೆ ನಡೆಸಲು ಆದೇಶಿಸಲಾಯಿತು. ವಿಚಾರಣಾಧಿಕಾರಿಗಳು ಸಿ.ಸಿ.ಎ. ನಿಯಮ 11 ರಡಿಯಲ್ಲಿ ನಿರ್ದಿಷ್ಟಪಡಿಸಿರುವ ವಿಧಿ ವಿಧಾನಗಳನ್ನು ಅನುಸರಿಸಿ ವಿಚಾರಣೆ ನಡೆಸಿ ದಿನಾಂಕ: 02.04.2005 ರಂದು ಶಿಸ್ತು ಪ್ರಾಧಿಕಾರಕ್ಕೆ ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ, ಈ ಇಲಾಖಾ ವಿಚಾರಣೆಗೂ ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕ ಹಾಜರಾಗಿರುವುದಿಲ್ಲ. ವಿಚಾರಣೆಗೆ ಹಾಜರಾಗಲು ಸೂಚಿಸಿ ವಿಚಾರಣಾಧಿಕಾರಿಗಳು ರವಾನಿಸಿರುವ ಸೂಚನಾ ಪತ್ರಗಳು ಇವರು ವಾಸಸ್ಥಳದಲ್ಲಿ ವಾಸಿಸುತ್ತಿಲ್ಲದ್ದರಿಂದ ಅಂಚೆ ಇಲಾಖೆಯಿಂದ ವಾಪಸ್ಸು ಬಂದಿರುತ್ತದೆ. ಇದರಿಂದ ವಿಚಾರಣಾಧಿಕಾರಿಗಳು ಇವರ ಅನುಪಸ್ಥಿತಿಯಲ್ಲಿ ವಿಚಾರಣೆಯನ್ನು ಸಿ.ಸಿ.ಎ. ನಿಯಮ 11(20) ರಲ್ಲಿ ನಿರ್ದಿಷ್ಟಪಡಿಸಿರುವ ನಿಯಮ ಅನುಸರಿಸಿ ವಿಚಾರಣೆ ನಡೆಸಿರುತ್ತಾರೆ. ವಿಚಾರಣೆಯಲ್ಲಿ ಇವರ ವಿರುದ್ಧ ಮಾಡಲಾದ ಆರೋಪವು ದಾಖಲೆ ಹಾಗೂ ಸಾಕ್ಷಿಗಳ ಹೇಳಿಕೆಯಿಂದ ಸಾಬೀತಾಗಿರುತ್ತದೆ. ವಿಚಾರಣಾಧಿಕಾರಿಗಳ ನಿರ್ಣಯದ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸುವಂತೆ ಸೂಚಿಸಿ, ವಿಚಾರಣಾ ವರದಿಯನ್ನು ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕ ಇವರ ನಿವಾಸದ ವಿಳಾಸಕ್ಕೆ ನೋಂದಾಯಿತ ಅಂಚೆ ಮೂಲಕ ರವಾನಿಸಲಾಯಿತು. ಆದರೆ ಈ ವರದಿಯೂ ಸಹ ಜಾರಿಯಾಗದೆ ಅಂಚೆ ಇಲಾಖೆಯಿಂದ ವಾಪಸ್ಸು ಬಂದಿರುತ್ತದೆ. ಪತ್ರ ವ್ಯವಹಾರದಲ್ಲಿ ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕ ಇವರನ್ನು ಸಂಪರ್ಕಿಸಲು ನಡೆಸಿರುವ ಪ್ರಯತ್ನಗಳು ವಿಫಲವಾಗಿರುವುದರಿಂದ ಸಿ.ಸಿ.ಎ. ನಿಯಮ 28(ಎ) ರಂತೆ 'ಪ್ರಜಾವಾಣಿ' ಮತ್ತು 'ವಿಜಯ ಕರ್ನಾಟಕ' ದೈನಂದಿನ ವೃತ್ತ ಪತ್ರಿಕೆಯಲ್ಲಿ ದಿನಾಂಕ: 27.07.2005 ರಂದು ಪ್ರಕಟಣೆ ಹೊರಡಿಸಿ ಕೆಲಸಕ್ಕೆ ಹಾಜರಾಗಲು ಸೂಚಿಸಿ, 15 ದಿನ ಕಾಲಾವಕಾಶ ನೀಡಿದರೂ ಶ್ರೀ ಕೆ. ಪ್ರಭುದೇವರವರು ಯಾವುದೇ ರೀತಿಯಲ್ಲಿ ಸ್ಪಂದಿಸಿರುವುದಿಲ್ಲ.

ಮೇಲಿನ ವಾಸ್ತವಾಂಶವನ್ನು ಗಮನಿಸಿದಾಗ ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕ, ರೇಷ್ಮೆ ನಿರ್ದೇಶನಾಲಯ, ಬೆಂಗಳೂರು ಇವರು ದಿನಾಂಕ: 01.02.2003 ರಿಂದ ಕಛೇರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಿಯಾಗುತ್ತಿರುವುದು ದಾಖಲೆಯಿಂದ ದೃಢಪಡುತ್ತದೆ. ಕೆಲಸಕ್ಕೆ ಹಾಜರಾಗುವಂತೆ ಸೂಚಿಸಿರುವ ಪತ್ರಕ್ಕೂ ಇವರು ಯಾವುದೇ ರೀತಿಯಲ್ಲೂ ಸ್ಪಂದಿಸಿರುವುದಿಲ್ಲ. ಈ ಹಂತದಲ್ಲಿ ಸಿ.ಸಿ.ಎ. ನಿಯಮದಡಿಯಲ್ಲಿ ನಡೆಸಲಾದ ಇಲಾಖಾ ವಿಚಾರಣೆಗೂ ಇವರು ಗೈರು ಹಾಜರಿಯಾಗಿರುವುದು ಪ್ರದರ್ಶಿತ ದಾಖಲೆಯಿಂದ ದೃಢಪಡುತ್ತದೆ. ಇದರಿಂದ ವಿಚಾರಣೆಯನ್ನು ಸಿ.ಸಿ.ಎ. ನಿಯಮ 11(20) ರಂತೆ ನಡೆಸಲಾಗಿದೆ. ವಿಚಾರಣೆಯಲ್ಲಿ ಪರೀಕ್ಷಿಸಲ್ಪಟ್ಟ ದಾಖಲೆ, ವಿಚಾರಣೆಯಲ್ಲಿ ಸಾಕ್ಷಿಗಳು ನೀಡುರುವ ಹೇಳಿಕೆ ಎಲ್ಲವೂ ಇವರ ಗೈರು ಹಾಜರಿಯನ್ನು ಸಾಬೀತುಪಡಿಸುತ್ತದೆ. ವಿಚಾರಣಾ ವರದಿಯ ಪ್ರತಿಯನ್ನು ಇವರ ನಿವಾಸದ ವಿಳಾಸಕ್ಕೆ ಕಳುಹಿಸಲಾಗಿದ್ದರೂ ಅದನ್ನು ಸಹ ಪಡೆಯದೇ ಕರ್ತವ್ಯ ಲೋಪವೆಸಗಿರುತ್ತಾರೆ. ಅಂತಿಮವಾಗಿ ಇವರನ್ನು ಸಂಪರ್ಕಿಸಲು ದೈನಂದಿನ ವೃತ್ತ ಪತ್ರಿಕೆಯಲ್ಲಿ ಪ್ರಕಟಿಸಲಾದ ಜಾಹೀರಾತು ಕೂಡ ಇವರು ಗೈರು ಹಾಜರಿಗೆ ಸಾಕ್ಷಿಯಾಗಿರುತ್ತದೆ. ಇವುಗಳೆಲ್ಲವನ್ನು ಗಮನಿಸಿದಾಗ ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕ ಇವರಿಗೆ ಸರ್ಕಾರಿ ಕೆಲಸದಲ್ಲಿ ಯಾವುದೇ ಆಸಕ್ತಿ ಇಲ್ಲದಿರುವುದು ದೃಢಪಡುತ್ತದೆ. ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರನಾದ ಶ್ರೀ ಕೆ. ಪ್ರಭುದೇವ, ರವರು ಸರ್ಕಾರಿ ಕೆಲಸದಲ್ಲಿ ತೋರಬೇಕಾದ ಕನಿಷ್ಠ ನಿಷ್ಠೆಯನ್ನು ತೋರದಿರುವುದು ವ್ಯಕ್ತವಾಗುತ್ತದೆ. ವಿಚಾರಣೆಯಲ್ಲಿ ಒದಗಿಸಿರುವ ಸಾಕ್ಷಿ, ಆರೋಪ ಪರ ಪ್ರದರ್ಶಿತ ದಾಖಲೆಗಳನ್ನು ಪರಾಮರ್ಶಿಸಿದಾಗ ಆಪಾದಿತರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿರುವುದರಿಂದ ಇವರಿಗೆ ದಂಡನೆ ವಿಧಿಸಲು ಈ ಆದೇಶ.

**ಆದೇಶ ಸಂಖ್ಯೆ: ಸಿ3:ಶಿಸ್ತು:ಲಿಪಿಕ-01:2004-05, ದಿನಾಂಕ: 30ನೇ ಆಗಸ್ಟ್ 2005**

ಪೀಠಿಕೆಯಲ್ಲಿ ವಿವರಿಸಿರುವ ಅಂಶಗಳನ್ವಯ ಹಾಗೂ 1957 ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 9ನೇ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅರವಿಂದ ಜನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು : ಶಿಸ್ತು ಪ್ರಾಧಿಕಾರಿಯಾದ ನಾನು ಶ್ರೀ ಕೆ. ಪ್ರಭುದೇವ, ಪ್ರಥಮ ದರ್ಜೆ ಸಹಾಯಕ, ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಕೆ.ಸಿ.ಎಸ್. (ಸಿ.ಸಿ.ಎ.) ನಿಯಮ 8 (viii) ರಲ್ಲಿ ನಿರ್ದಿಷ್ಟಪಡಿಸಿರುವಂತೆ ಸೇವೆಯಿಂದ ವಜಾ ಮಾಡಿರುತ್ತೇನೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು,
ಶಿಸ್ತು ಪ್ರಾಧಿಕಾರಿಗಳು.

ಪಿ.ಆರ್. 1650